# ಶ್ರೀವಿಜಯಧ್ವಜತೀರ್ಥರು

(ಜೀವನ, ಕೃತಿಗಳು ಪರಿಚಯ)



ಸಂಪಾದಕರು

ಶ್ರೀನಿವಾಸ ಸು. ಮಠದ

ಪ್ರಕಾಶಕರು

ಶ್ರೀ ಶ್ರೀನಿವಾಸ ಭಕ್ತ ಮಂಡಲಿ, ವಿಜಯನಗರ ಬೆಂಗಳೂರು.

## ಇದೇ ಲೇಖಕರ ಪ್ರಕಟಿತ ಕೃತಿಗಳು

| | | |
|---|---|---|
| 01) | ಶ್ರೀಮಜ್ಜಯತೀರ್ಥ ಸುಪ್ರಭಾತ | 00-60 |
| 02) | ಶ್ರೀಸಪ್ತರ್ಷಿರಾಮಾಯಣ ಹಾಗೂ ಶ್ರೀರಾಮವೇದಪಾದಸ್ತೋತ್ರ (ತೃತೀಯ ಮುದ್ರಣ) | 5-00 |
| 03) | ದಾಸ ಸಾಹಿತ್ಯ ಸೌರಭ (ಸಂಪುಟ-1) | 18-00 |
| 04) | ಉಪನೀತರಿಗೆ ಉಪಯುಕ್ತ ಉಪದೇಶ (ದ್ವಿತೀಯ ಮುದ್ರಣ) | 30-00 |
| 05) | ಶ್ರೀ ಸಂಧ್ಯಾಸಾರ ಸಂಗ್ರಹ (ಪಂಚಮ ಮುದ್ರಣ) | 20-00 |
| 06) | ಶ್ರೀರುಕ್ಮಿಣೀಶವಿಜಯ ಸಾರಸಂಗ್ರಹ (ಸೈದ್ಧಾಂತಿಕ ಅಧ್ಯಯನ) | 20-00 |
| 07) | ಶ್ರೀ ದೇವಪೂಜಾ ಸಾರಸಂಗ್ರಹ (ಷಷ್ಠ ಮುದ್ರಣ) | 20-00 |
| 08) | ಸದಾಚಾರ ಸೌರಭ (ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ ಉಜಿರೆ ಅವರಿಂದ ಪ್ರಕಟಿತ) | 25-00 |
| 09) | ಶ್ರೀವಿಷ್ಣುಸಹಸ್ರನಾಮಸ್ತೋತ್ರಮ್ (ಶ್ರೀ ಶ್ರೀ ಸತ್ಯಸಂಧತೀರ್ಥರ ಭಾಷ್ಯಾನುಸಾರಿ) (ಅಷ್ಟಮ ಮುದ್ರಣ) | 25-00 |
| 10) | ಶ್ರೀ ವೈಶ್ವದೇವಸಾರಸಂಗ್ರಹ (ತೃತೀಯ ಮುದ್ರಣ) | 20-00 |
| 11) | ದಾಸ ಸಾಹಿತ್ಯ ಸೌರಭ (ಸಂಪುಟ-2) | 20-00 |
| 12) | ಶ್ರೀಕೃಷ್ಣಾವತಾರ ಸಂದೇಶ | 25-00 |
| 13) | ಶ್ರೀ ಅಣುಭಾಷ್ಯ ಸಾರಸಂಗ್ರಹ (ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿ) (ಕನ್ನಡಾನುವಾದ) | 25-00 |
| 14) | ವೇದ ಬ್ರಹ್ಮ ಸೂತ್ರಗಳು ಇತ್ಯಾದಿ (ಆನಂದತೀರ್ಥ ಪ್ರತಿಷ್ಠಾನ, ಬೆಂಗಳೂರು ಪ್ರಕಟಿತ) | 50-00 |
| 15) | ಗಜೇಂದ್ರಮೋಕ್ಷ (ಒಂದು ಅಧ್ಯಯನ) | 30-00 |
| 16) | ದಶಾವತಾರ ಸ್ತೋತ್ರಮಂಜರೀ (ಎಸ್.ಎಮ್.ಎಸ್.ಓ.ಸಭಾ ಪ್ರಕಟಿತ) | 30-00 |
| 17) | ಮಧ್ವಾಷ್ಟಕಮ್ (ವಿವರಣೆ ಸಹಿತ) | 10-00 |
| 18) | ಗೀತೆಯ ಅಂತರಂಗ | 20-00 |
| 19) | ಧಾತ್ರೀಮಹಿಮೆ, ಧಾತ್ರೀಹೋಮ ಹಾಗೂ ವನಭೋಜನಮಹಾತ್ಮೆ (ದ್ವಿತೀಯ ಮುದ್ರಣ) | 10-00 |
| 20) | ತೀರ್ಥಪ್ರಬಂಧ : ಒಂದು ಅಧ್ಯಯನ | 20-00 |
| 21) | ಶ್ರೀನರಸಿಂಹಸ್ತೋತ್ರಮಂಜರೀ (ಚತುರ್ಥ ಮುದ್ರಣ) (ಅಪೂರ್ವ ಸ್ತೋತ್ರಸಂಗ್ರಹ) | 30-00 |
| 22) | ಪ್ರಾತಃ ಸ್ತೋತ್ರಗಳು (ಕನ್ನಡ ಭಾವಾನುವಾದ ಸಹಿತ) | 15-00 |
| 23) | ಸಮುದ್ರ ಮಥನ - ಒಂದು ಅಧ್ಯಯನ | 30-00 |
| 24) | ಶ್ರೀ ರುಕ್ಮಿಣೀಶ ವಿಜಯಃ (ಕನ್ನಡ ಕಥಾರೂಪ) | 15-00 |
| 25) | ಶ್ರೀವೇದವ್ಯಾಸ ಸ್ತೋತ್ರಮಂಜರೀ (ಹರಿದಾಸರ ಕೃತಿಗಳ ಸಹಿತ) | 20-00 |
| 26) | ಶ್ರೀನವಗ್ರಹ ಸ್ತೋತ್ರ ಮಂಜರೀ | 15-00 |
| 27) | The glory of great saint Sri Vadirajteerth | 15-00 |
| 28) | ಶ್ರೀಕೃಷ್ಣಸ್ತೋತ್ರ ಮಂಜರೀ (ಅಪೂರ್ವ ಸ್ತೋತ್ರ ಸಂಗ್ರಹ) | 30-00 |
| 29) | ಶ್ರೀವಾದಿರಾಜಪೂಜ್ಯಚರಣ ವಿರಚಿತ ಶ್ರೀಮದ್ ಭಾಗವತಾನುಕ್ರಮಣಿಕಾ ಕನ್ನಡಾನುವಾದ | 20-00 |
| 30) | ಕಾವ್ಯ ಶಾಸ್ತ್ರವಿನೋದ (ಎಸ್.ಎಮ್.ಎಸ್.ಓ.ಸಭಾ ಪ್ರಕಟಿತ) | 20-00 |
| 31) | ವಿವಾಹಿತರಿಗೆ ವಿಹಿತ ಉಪದೇಶ | 30-00 |
| 32) | ವೈದ್ಯಮೂರ್ತಿ ಶ್ರೀಧನ್ವಂತರಿ | 15-00 |
| 33) | ಶ್ರೀ ಋಷಿಪಂಚಮೀ ವ್ರತ, ಶ್ರೀವಿಷ್ಣು ಪಂಚಕ ವ್ರತ, ಶ್ರೀ ಭೀಷ್ಮ ಪಂಚಕ ವ್ರತ | 20-00 |
| 34) | ಶ್ರೀ ಅಧ್ಯಾತ್ಮಮಾಲಿಕಾ (ಕನ್ನಡಾನುವಾದ, ವಿವರಣೆ ಸಹಿತ) | 10-00 |
| 35) | ಸಪ್ತಾಹ ಕ್ರಮದಲ್ಲಿ ಶ್ರೀಮದ್ ಭಾಗವತ ಕಥಾಸಾರ ಸಂಗ್ರಹ (ಚತುರ್ಥ ಮುದ್ರಣ) | 50-00 |
| 36) | ಶ್ರಾದ್ಧಕರ್ಮ (ಶ್ರೀ ರಾಘವೇಂದ್ರ ದರ್ಶನಕೇಂದ್ರ, ಬೆಂಗಳೂರು ಪ್ರಕಟಿತ) (ತೃತೀಯ ಮುದ್ರಣ) | 80-00 |
| 37) | ಸೂರ್ಯಪುತ್ರ ಶನೈಶ್ಚರ | 10-00 |
| 38) | ದಾಸಸಾಹಿತ್ಯ ನಿತ್ಯಾಚರಣೆಗಳು (ವೈಜ್ಞಾನಿಕ ದೃಷ್ಟಿಯಲ್ಲಿ) | 15-00 |

# ಶ್ರೀವಿಜಯಧ್ವಜತೀರ್ಥರು

(ಜೀವನ, ಕೃತಿಗಳು ಪರಿಚಯ)

ಸಂಪಾದಕರು

ಶ್ರೀನಿವಾಸ ಸು. ಮಠದ

ಶ್ರೀಶ್ರೀನಿವಾಸ ಭಕ್ತಮಂಡಲಿ

ವಿಜಯನಗರ ಬೆಂಗಳೂರು.

# *SRI VIJAYADHWAJA TEERTHARU* *(Life & works)*

By Srinivas.S.Mathad B.SC.MA
Recipient of " Parimala Prashasti " " Jnanajyoti Award".
and " Haridas Sahitya Seva Praveena "
Ajarekar Chal, Meenaxi Chowk,
BIJAPUR-586101

Mobile No : 9972078061

First Edition : 2010

Copies : 1000

Pages : 36

Price :



Publisher - : Geeta Prakashana
Ajarekar Chal, Meenaxi Chowk
BIJAPUR-586101., Ph : 08352-258362

Printers :
**VIJAY OFFSET PRINTERS**
Ajrekar chal, meenaxi chowk
BIJAPUR - 586101.Ph : 08352-251792

# ಶ್ರೀದಿಗ್ವಿಜಯರಾಮೋ ವಿಜಯತೇ

## ಶ್ರೀಮಜ್ಜಗದ್ಗುರು ಮಧ್ವಾಚಾರ್ಯಮೂಲಮಹಾಸಂಸ್ಥಾನ, ಉತ್ತರಾದಿಮಠ

ಶ್ರೀಮತ್‌ಪರಮಹಂಸ ಪರಿವ್ರಾಜಕೇತ್ಯಾದಿ ಬಿರುದಾಲಂಕೃತ ಪದವಾಕ್ಯಪ್ರಮಾಣ
ಪಾರಾವಾರ ಪಾರೀಣ ಶ್ರೀಮದ್‌ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ
ಶ್ರೀಮನ್‌ಮಧ್ವಾಚಾರ್ಯ ಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶರಾದ
ಶ್ರೀಮೂಲರಾಮ,ದಿಗ್ವಿಜಯರಾಮ, ವೇದವ್ಯಾಸ ಪಾದಪದ್ಮಾರಾಧಕರಾದ
ಶ್ರೀಶ್ರೀ1008 ಶ್ರೀಸತ್ಯಪ್ರಮೋದತೀರ್ಥಕರಕಮಲಸಂಜಾತ

## ಶ್ರೀಶ್ರೀ1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ



ಶ್ರೀವಿಜಯಧ್ವಜತೀರ್ಥರು ಮಹಾನುಭಾವರು, ಮಹಾಜ್ಞಾನಿಗಳು ಮಹಾತಪಸ್ವಿಗಳು, ಪ್ರಾಚೀನ ಟಿಪ್ಪಣೀಕಾರರು. ಶ್ರೀಮದ್‌ಭಾಗವತಕ್ಕೆ ಸಮಗ್ರವಾಗಿವ್ಯಾಖ್ಯಾನ ಮಾಡಿದ ಕೀರ್ತಿ ಇವರಿಗಿದೆ. ಇದರ ಉಪಕಾರವನ್ನು ಮುಂದಿನ ವ್ಯಾಖ್ಯಾನಕಾರರು ಸ್ಮರಿಸುತ್ತಾರೆ. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಪೇಜಾವರ ಮಠದ ಪ್ರಾಚೀನ ಯತಿಗಳು ವಿಜಯಧ್ವಜತೀರ್ಥರು.

ಉಡುಪಿಯ ಉತ್ತರಾದಿಮಠದಲ್ಲಿ ಶ್ರೀಮಟ್ಟೀಕಾಚಾರ್ಯರ ಮೃತ್ತಿಕಾ ವೃಂದಾವನವನ್ನು ನಾವು ಪ್ರತಿಷ್ಠಾಪನೆ ಮಾಡುವ ಪ್ರಸಂಗದಲ್ಲಿ ಶ್ರೀಪೇಜಾವರಮಠಾಧೀಶರಾದ ಶ್ರೀವಿಶ್ವೇಶತೀರ್ಥರು ಉಪಸ್ಥಿತರಿದ್ದು ವೇದಿಕೆಯ ಮೇಲೆ ಕುಳಿತು ಮಾತನಾಡುವಾಗ ನಮಗೆ, ಶ್ರೀವಿಜಯಧ್ವಜತೀರ್ಥರು ಹಾಗೂ ಶ್ರೀಜಯತೀರ್ಥರ ಕುರಿತಾಗಿ ಅವರ ಮಠದಲ್ಲಿ ಸಂಪ್ರದಾಯದಿಂದ ತಿಳಿದುಬಂದ ಕಥೆ ಎಂಬುದಾಗಿ

ಕೆಲವು ವಿಷಯಗಳನ್ನು ತಿಳಿಸಿದರು. ಒಂದು ಪ್ರಸಂಗದಲ್ಲಿ ಶ್ರೀವಿಜಯಧ್ವಜತೀರ್ಥರು ಧ್ಯಾನಮಗ್ನರಾಗಿ ಇರುವಾಗ ಪೋರ್ಚುಗೀಸರು ಇವರನ್ನು ಕರೆದುಕೊಂಡು ಹೋಗಿ ಮತ್ತೆ (ಇವರನ್ನು) ಸ್ವಲ್ಪೇ ಹೊತ್ತಿನಲ್ಲಿ ಇವರಿದ್ದ ಸ್ಥಳಕ್ಕೆ ತಿರುಗಿ ತಂದು ಬಿಟ್ಟರು ಆಗ ಶ್ರೀಮಟ್ಟೀಕಾಕೃತ್ಪಾದರು ಶ್ರೀವಿಜಯಧ್ವಜರಿಗೆ ಶ್ರೀಮದ್‌ಭಾಗವತಕ್ಕೆ ವ್ಯಾಖ್ಯಾನವನ್ನು ಬರೆಯಲು ಸೂಚಿಸಿದರು. (ಶ್ರೀಕೃಷ್ಣನ ಪೂಜೆಯನ್ನು ಮಾಡಲು) ನಿಮ್ಮ ಬಗ್ಗೆ ಯಾವುದೇ ಸಂಶಯಕ್ಕೆ ಕಾರಣ ಇಲ್ಲ ಆದರೂ ಈ ಪವಿತ್ರವಾದ ವ್ಯಾಖ್ಯಾನವನ್ನು ರಚನೆಮಾಡಿ ಶ್ರೀಕೃಷ್ಣನ ಪೂಜೆಯನ್ನು ಮಾಡಿರಿ ಎಂಬುದಾಗಿಯೂ ಶ್ರೀಮಟ್ಟೀಕಾಕೃತ್ಪಾದರು ಅಭಿಪ್ರಾಯಪಟ್ಟರು.

ಆದರೆ ಭಾಗವತಕ್ಕೆ ವ್ಯಾಖ್ಯಾನವನ್ನು ರಚಿಸಿದ ಮೇಲೆಯೂ ಉಳಿದವರು ಶ್ರೀವಿಜಯಧ್ವಜತೀರ್ಥರು ಶ್ರೀಕೃಷ್ಣನ ಪೂಜೆಯನ್ನು ಮಾಡುವದರ ಬಗ್ಗೆ ಸಹಮತಿಯನ್ನು ನೀಡದಿರುವಾಗ ಸ್ವತಃ ಶ್ರೀಮಟ್ಟೀಕಾಕೃತ್ಪಾದರು ಉಡುಪಿಗೆ ಬಂದು ಶ್ರೀವಿಜಯಧ್ವಜತೀರ್ಥರ (ಪಾವಿತ್ರ್ಯವನ್ನು) ಶುದ್ಧಿಯನ್ನು ಎಲ್ಲರಿಗೂ ತಿಳಿಸಿ ಶ್ರೀಕೃಷ್ಣನ ಪೂಜೆಯನ್ನು ಶ್ರೀವಿಜಯಧ್ವಜತೀರ್ಥರು ಮಾಡುವದಕ್ಕೆ ಅವಕಾಶ ಕಲ್ಪಿಸಿಕೊಟ್ಟರು. ನಂತರ ಅದನ್ನು ಎಲ್ಲರೂ ಸಂತೋಷದಿಂದ ಒಪ್ಪಿಕೊಂಡರು.

ಪೇಜಾವರ ಶ್ರೀಗಳ ಮುಖದಿಂದ ಕೇಳಿತಿಳಿದ, ಅವರು ಚಿಕ್ಕಂದಿನಲ್ಲಿ ಹಿರಿಯರಿಂದ ಸಾಂಪ್ರದಾಯಿಕವಾಗಿ ತಿಳಿದುಕೊಂಡ ಈ ಕಥೆಯಿಂದ ಶ್ರೀಮಟ್ಟೀಕಾಕೃತ್ಪಾದರಿಗೆ ಶ್ರೀವಿಜಯಧ್ವಜತೀರ್ಥರ ಜ್ಞಾನ ಹಾಗೂ ಶುದ್ಧಿಯ ಬಗ್ಗೆ ಇರುವ ಸದಭಿಪ್ರಾಯವು ಸ್ಪಷ್ಟವಾಗುತ್ತದೆ.

ಇಂತಹ ಮಹಾಜ್ಞಾನಿಗಳ ಗ್ರಂಥಕಾರರಮಹಿಮೆಯನ್ನು ತಿಳಿದು ಅವರ ಗ್ರಂಥವನ್ನು ಓದಿದರೆ ಮಹಾಫಲ. ಈ ದೃಷ್ಟಿಯಿಂದ ನಮ್ಮ ಪ್ರಿಯಶಿಷ್ಯರಾದ ಪಂ. ಶ್ರೀನಿವಾಸಾಚಾರ್ಯ ಸು. ಮಠದ ಇವರು ಬಹಳ ಸುಂದರವಾಗಿ ಶ್ರೀವಿಜಯಧ್ವಜತೀರ್ಥರ ಚರಿತ್ರೆಯನ್ನು (ರಚಿಸಿ) ಕನ್ನಡದಲ್ಲಿ ಬರೆದು ಬಹಳ ಉತ್ತಮವಾದ ಗುರುಸೇವೆಯನ್ನು ಮಾಡಿದ್ದಾರೆ. ಇವರಿಗೆ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮದಿಗ್ವಿಜಯರಾಮ, ವೇದವ್ಯಾಸದೇವರು ಜ್ಞಾನಭಕ್ತಿ ವೈರಾಗ್ಯಗಳನ್ನು ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇವೆ.

श्रीमत्सत्यात्मतीर्थाः
उत्तरादिमठः

ನವವೃಂದಾವನ ಗಡ್ಡೆ
3–12–2010

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ



# ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು
# ಶ್ರೀಪೇಜಾವರಅಧೋಕ್ಷಜಮಠ
# ಜಗದ್ಗುರುಶ್ರೀಮಧ್ವಾಚಾರ್ಯ
# ಮಹಾಸಂಸ್ಥಾನ ಉಡುಪಿ

## ಅನುಗ್ರಹ ಸಂದೇಶ

ಶ್ರೀ ವಿಜಯಧ್ವಜತೀರ್ಥರ ಬಗ್ಗೆ ನಾನು ಬಾಲ್ಯದಲ್ಲಿ ಹಿರಿಯ ವಿದ್ವಾಂಸರಿಂದ ಕೇಳಿದ ಪ್ರಚಲಿತವಾದ ಕಥೆಯು ಹೀಗಿದೆ. ಶ್ರೀ ವಿಜಯಧ್ವಜತೀರ್ಥರು ಸಮುದ್ರ ತೀರದಲ್ಲಿ ಯೋಗಮಗ್ನರಾಗಿದ್ದರು ಆಗ ಹಡಗಿನಲ್ಲಿ ಆ ದಾರಿಯಲ್ಲಿ ಹೋಗುತ್ತಿದ್ದ ಪೋರ್ಚುಗೀಸ ಮತಪ್ರಚಾರಕರು ಕುತೂಹಲದಿಂದ ಅವರನ್ನು ಹಡಗಿನಲ್ಲಿ ಏರಿಸಿಕೊಂಡು ತುಸು ದೂರ ಹೋದರು. ಆದರೆ ಅಸಂಪ್ರಜ್ಞಾತ ಸಮಾಧಿಸ್ಥರಾದ ವಿಜಯಧ್ವಜರು ಇದರ ಪರಿವೆಯೇ ಇಲ್ಲದೆ ಧ್ಯಾನಮಗ್ನರಾಗಿದ್ದರು. ಆಶ್ಚರ್ಯಭರಿತರಾದ ವಿದೇಶೀಯರು ಇವರ ಗೊಡವೆಯೇ ಬೇಡವೆಂದು ಪುನಃ ಅದೇ ಜಾಗದಲ್ಲಿ ಇವರನ್ನು ಕೆಳಗಿಳಿಸಿದರು. ಸಮುದ್ರಯಾನ ಮಾಡಿದರೆಂಬ ಕಾರಣದಿಂದ ಉಳಿದ ಅಷ್ಟಮಠಾಧೀಶರು ಇವರನ್ನು ಸ್ವೀಕರಿಸಲು ಗೊಂದಲದಲ್ಲಿ ಬಿದ್ದರು. ಅದೇ ಸಂದರ್ಭದಲ್ಲಿ ಅಲ್ಲಿಗೆ ಆಗಮಿಸಿದ ಟೀಕಾಕೃತ್ಪಾದರು ಇವರ ಮಹಿಮೆಯನ್ನು ಎಲ್ಲರಿಗೂ ತಿಳಿಸಿ ಹೇಳಿದ್ದರಿಂದ ಈ ಗೊಂದಲದ ಪರಿಹಾರ ಆಯಿತು. ಇದು ಬಾಲ್ಯದಲ್ಲಿ ಹಳೆಯ ವಿದ್ವಾಂಸರು ನನಗೆ ತಿಳಿಸಿದ ಕಥೆಯಾಗಿದೆ. 'ಯಸ್ತು ಆತ್ಮರತಿರೇವ ಸ್ಯಾತ್ ' ಎಂಬ ಭಗವದ್ಗೀತೆಯ ವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಅಸಂಪ್ರಜ್ಞಾತ ಸಮಾಧಿಯ ಸಮಯದಲ್ಲಿ ಮಾಡಿದ ಅಕರ್ಮದಿಂದ ಯಾವುದೇ ಪಾಪಲೇಪವಾಗುವುದಿಲ್ಲವೆಂದು ಸ್ಪಷ್ಟಪಡಿಸಿರುವುದರಿಂದ ಸಮುದ್ರ ಯಾನಾದಿಗಳಿಂದ ಅವರಿಗೆ ಯಾವುದೇ ದೋಷವುಂಟಾಗಿಲ್ಲ. ಆ ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ರೂಪದಲ್ಲಿ ಭಾಗವತವ್ಯಾಖ್ಯಾನವನ್ನು ರಚಿಸಿರುವರೆಂಬುದು ಕೇವಲ ಕಲ್ಪನೆಯಾಗಿದೆ ಅಂತೂ ಈ ಘಟನೆಯಿಂದ ಅವರು ಅಪರೋಕ್ಷಜ್ಞಾನಿಗಳಾದ ಮಹಾತಪಸ್ವಿಗಳೆಂದು ಸಿದ್ಧವಾಗುತ್ತದೆ. ಶ್ರೀಮಧ್ವಾಚಾರ್ಯರು ತಾವು ಸಮುದ್ರಸ್ನಾನ ಮಾಡುವಾಗ ಅಲೆಗಳಿಂದ ತೊಂದರೆಯಾಗದಂತೆ ಸಮುದ್ರವನ್ನು ಶಾಂತ ಸರೋವರದಂತೆ ಸ್ತಬ್ಧಗೊಳಿಸಿದರೆ ಶ್ರೀವಿಜಯಧ್ವಜತೀರ್ಥರು ಅಶ್ವತ್ಥವೃಕ್ಷಗಳ ಎಲೆಗಳ ಚಲನದಿಂದ ಉಂಟಾದ ಗಾಳಿ ಹಾಗೂ ಸಪ್ಪಳಗಳಿಂದ ತಮ್ಮ ವ್ಯಾಖ್ಯಾನರಚನೆಗೆ ಅಡಚಣೆಯುಂಟಾದಾಗ ಆ ಅಶ್ವತ್ಥವೃಕ್ಷವನ್ನೇ ಸ್ತಬ್ಧಗೊಳಿಸಿದ ಪವಾಡ ಪುರುಷರು ಹೀಗೆ ಶ್ರೀಮದಾಚಾರ್ಯರು ಮತ್ತು ಶ್ರೀವಿಜಯಧ್ವಜತೀರ್ಥರಿಬ್ಬರೂ ಪ್ರಕೃತಿಯ ಮೇಲೆ ತಮ್ಮ ಪ್ರಭಾವ ತೋರಿಸಿದ ಮಹಾಪುರುಷರು ಶ್ರೀವಿಜಯಧ್ವಜತೀರ್ಥರ ಬಗ್ಗೆ ಇಂತಹ ಕೃತಿಯನ್ನು ರಚಿಸಿದ ಶ್ರೀನಿವಾಸ ಮಠದ ಇವರನ್ನು ವಿಶೇಷವಾಗಿ ಹರಿಗುರುಗಳು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು

# ಶ್ರೀಗೋವಿಂದರಾಜೋ ವಿಜಯತೇ

## ಆಶೀರ್ವಚನ

ಶ್ರೀಮದ್‌ಭಾಗವತ ಪುರಾಣಗಳ ರಾಜ. ಇದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಶ್ರೀಮದಾಚಾರ್ಯರ ತಾತ್ಪರ್ಯದ ನೆರವು ಅತೀ ಅವಶ್ಯ. ಆದರೆ ಇಷ್ಟರಿಂದ ಮಂದಮತಿಗಳಿಗೆ ಅದರ (ಅರ್ಥ) ಹಾರ್ದ ಸಂಪೂರ್ಣವಾಗಿ ತಿಳಿಯದು. ಇದನ್ನು ತಿಳಿಸಿಕೊಡಲು ಶ್ರೀವಿಜಯಧ್ವಜತೀರ್ಥರ ಪದರತ್ನಾವಲೀ ವ್ಯಾಖ್ಯಾನವು ಬೇಕಾಗುತ್ತದೆ.

ಶ್ರೀಮದಧೋಕ್ಷಜ ಶುಭಸಂಪ್ರದಾಯ ಪ್ರವರ್ತಕರ ಪರಂಪರೆಯಲ್ಲಿ ಬಂದ ಶ್ರೇಷ್ಠಯತಿಗಳು ಶ್ರೀ ವಿಜಯಧ್ವಜತೀರ್ಥರು. ಅವರು ಶ್ರೀಮದಾಚಾರ್ಯರ ಶ್ರೀಮದ್ ಭಾಗವತತಾತ್ಪರ್ಯದ ಭಾವವನ್ನು ಮನಸ್ಸಿನಲ್ಲಿಟ್ಟುಕೊಂಡು "ಪದರತ್ನಾವಲೀ" ಎಂಬ ಪ್ರಮಾಣೋದಾಹರಣ ಪೂರ್ವಕವಾದ ವ್ಯಾಖ್ಯಾನವನ್ನು ರಚಿಸಿ ಮಹದುಪಕಾರ ಮಾಡಿದ ಮಹನೀಯರು. ಇಂಥ ಮಹನೀಯರ, ಅವರ ಕೃತಿಗಳ ಕಿಂಚಿತ್ತಾದ ಪರಿಚಯವನ್ನು ನಮ್ಮ ಶಿಷ್ಯ ಶ್ರೀನಿವಾಸ. ಸು. ಮಠದನು ಪ್ರಸಕ್ತ ಚಿಕ್ಕ ಹೊತ್ತಿಗೆಯಲ್ಲಿ ಸಂಗ್ರಹಿಸಿ ಕೊಟ್ಟಿದ್ದಾನೆ. ಇದರ ಸದುಪಯೋಗವನ್ನು ಮಾಡಿಕೊಂಡು ಸಜ್ಜನರು ಕೃತಾರ್ಥರಾಗಬೇಕು.

ಈ ಚಿಕ್ಕ ಪುಸ್ತಕವನ್ನು ಹೊರತಂದ ಶ್ರೀನಿವಾಸ. ಸು. ಮಠದ ಈತನಿಗೆ ಶ್ರೀಹರಿವಾಯು ಗುರುಗಳು ಜ್ಞಾನ, ಭಕ್ತಿ ವೈರಾಗ್ಯಾದಿಗಳನ್ನು ದಯಪಾಲಿಸಲಿ ಎಂಬುದಾಗಿ ಶ್ರೀಬಾದರಾಯಣಾಭಿನ್ನ ಶ್ರೀಗೋವಿಂದರಾಜರಲ್ಲಿ ಪ್ರಾರ್ಥಿಸುತ್ತೇವೆ.

ವಿಜಯಪುರ
30–11–10

ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ
ವಿಜಯಪುರ.

## ಶ್ರೀಗುರುಭ್ಯೋನಮಃ । ಹರಿಃ ಓಂ।

# ಸಹೃದಯರ ಎರಡು ಮಾತುಗಳು

ಶ್ರೀಮದ್ಭಾಗವತಪುರಾಣವು ಪ್ರಚಲಿತಪುರಾಣಗಳಲ್ಲಿ ಪ್ರಾಧಾನ್ಯತೆ ಪಡೆದಿದೆ. ಈ ಪುರಾಣಶ್ರವಣವನ್ನು ದೀರ್ಘಕಾಲ, ಪ್ರೋಷ್ಠಪದಿ, ಸಪ್ತಾಹ ಇತ್ಯಾದಿ ರೀತಿಯಾಗಿ ಭಕ್ತಿಶ್ರದ್ಧೆಯುಳ್ಳ ಶ್ರೋತೃಗಳ ಆಸಕ್ತಿ ಕಾಲಮಿತಿ ಇತರ ಅನುಕೂಲತೆಗಳನ್ನನುರಿಸಿ ಕಾರ್ಯಕ್ರಮಗಳು ನಡೆಯುತ್ತವೆ. ಭಾಗವತಪುರಾಣಿಕರು ತಮ್ಮ ಪ್ರವಚನಗಳಲ್ಲಿ ಶ್ರೀಮದಾಚಾರ್ಯರ ಭಾಗವತತಾತ್ಪರ್ಯ ನಿರ್ಣಯ ಮತ್ತು ವಿಜಯಧ್ವಜೀಯ ವ್ಯಾಖ್ಯಾನಗಳನ್ನು ಪದೇ ಪದೇ ಉಲ್ಲೇಖಿಸುತ್ತಲೇ ಇರುತ್ತಾರೆ.

ಈ ಸುಪ್ರಸಿದ್ಧ ವಿಜಯಧ್ವಜೀಯ ವ್ಯಾಖ್ಯಾನವನ್ನು ಕೇಳಿ ಕೇಳಿ ಎಲ್ಲ ಬುದ್ಧಿಜೀವಿಗಳಿಗೂ ಗ್ರಂಥಕರ್ತರ ವಿಚಾರವಾಗಿ ಸಹಜವಾದ ಕುತೂಹಲವು ಉಂಟಾಗುತ್ತದೆ. ಯಾರೀ ಮಹನೀಯರು ! ಅವರ ದೇಶ, ಕಾಲ, ಮಹತ್ವದ ಜೀವನ ವಿಚಾರಗಳು ಇನ್ನಿತರಕೃತಿಗಳು ಮಹಾತ್ಮೆಗಳನ್ನು ತಿಳಿಯಲು ಇಚ್ಛೆಯಾಗದೇ ಇರಲಾರದು. ಆದರೆ ಈ ಐದುನೂರು ವರ್ಷಗಳ ಪ್ರಾಚೀನಕಾಲದ ವಿಷಯಗಳನ್ನು ಹುಡುಕಿಕೊಂಡು ಹೋಗುವ ಉತ್ಸಾಹಿಗಳಾರು ? ಈ ಪ್ರಶ್ನೆಗೆ ಈಗ ಬಂತು ಕಾಲ. ಶ್ರೀಮದ್ಭಾಗವತವನ್ನು ವಿಜಯಧ್ವಜೀಯವ್ಯಾಖ್ಯಾನುಸಾರಿ ಅಧ್ಯಯನ ಮಾಡಿ ಪುಳಕಾಂಕಿತರಾಗಿ ಕುತೂಹಲಾತಿಶಯಿಗಳಾಗಿ ಉತ್ಸಾಹಭರಿತರಾಗಿ ಶ್ರದ್ಧಾಭಕ್ತಿಯುಳ್ಳವರಾಗಿ ಆ ಗ್ರಂಥಕರ್ತರ ಜೀವನಚರಿತ್ರೆಯ ಕೆಲವು ಭಾಗಗಳನ್ನಾದರೂ ಶೋಧ ಮಾಡಿ ದಾಖಲಿಸಿ ತಾವೂ ಆನಂದಪಟ್ಟು ಇತರರೊಂದಿಗೆ ತಮ್ಮಾನಂದವನ್ನು ಹಂಚಿಕೊಳ್ಳಲು ಸಾಹಸ ಮಾಡಿದ ವ್ಯಕ್ತಿಯೇ ಪಂಡಿತ ಶ್ರೀಶ್ರೀನಿವಾಸ. ಸು. ಮಠದ ಅವರು.

ಇದೊಂದು ಕೇವಲ ಸಾಮಾನ್ಯ ವಿಷಯ ಮತ್ತು ಸಾಮಾನ್ಯ ಕಿರುಹೊತ್ತಿಗೆ ಎಂದುಪರಿಗಣಿಸಬಾರದು. ಇಂಥ ಪುಣ್ಯಶ್ಲೋಕರ ಚರಿತ್ರೆಯ ಅನುವಾದ ಅಧ್ಯಯನ ಶ್ರವಣಮನನಾದಿಗಳು ಮನಸ್ಸಿನ ಮಾಲಿನ್ಯವನ್ನು ತೊಳೆದು ಶುದ್ಧಿಗೊಳಿಸುತ್ತವೆ. ಮನೋವಿಶುಧ್ಯೈ ಚರಿತಾನುವಾದಃ ಎಂದು ಸಾರಿದೆ ಸುಮಧ್ವವಿಜಯ.

ಪ್ರಾಚೀನಕಾಲದಿಂದಲೂ ಮನೆಯಲ್ಲಾಗಲೀ ಮಠಗಳಲ್ಲಾಗಲೀ ದಾಖಲಿಸುವ ವ್ಯವಸ್ಥೆ ನಮ್ಮಲ್ಲಿಲ್ಲದ್ದರಿಂದ ಸಾಕಷ್ಟು ವಿಷಯಗಳು ದೊರಕುವದು ಅಪರೂಪ. ಶ್ರೀ ಮಠದ ಅವರಿಗೆ ಶ್ರೀಗಳವರ ಪೂರ್ವಾಶ್ರಮವಿಷಯ ದೊರೆತಂತಿಲ್ಲ. ಬಾಲ್ಯದಲ್ಲಿಯೇ ಆಶ್ರಮದೀಕ್ಷೆ ಪಡೆದದ್ದರಿಂದ ಅದನ್ನುಳಿದು ಪೀಠಸ್ಥರಾಗಿ ಅವರು ಅರವತ್ತು ವರುಷ ಕಾಲವನ್ನು ಸಾರ್ಥಕಗೊಳಿಸಿದ್ದಾರೆ. ಎರಡು–ಮೂರು ಮನಸೆಳೆಯುವ ಘಟನೆಗಳನ್ನು ಬಿಟ್ಟರೆ ಉಳಿದ ಮಹಾತ್ಮೆಗಳೆಲ್ಲವೂ ಅವರ ಗ್ರಂಥರಚನೆಯಲ್ಲಿಯೇ ಅಡಗಿವೆ. ಗಮನಾಸನ ಸಂಕಥಾದಿಲೀಲಾಗಳು ಇಷ್ಟಾದರೂ ದೊರಕಿದ್ದಕ್ಕೆ ಸಂತೋಷಪಡಬೇಕು.

ಶ್ರೀ ಶ್ರೀನಿವಾಸ ಅವರು ಈಗ ಸಂಗ್ರಹಿಸಿರುವ ವಿಷಯುಗಳನ್ನು ದಂತಕಥಾರೂಪದಲ್ಲಿ ಕೇಳಿದ್ದೆವು. ಈಗ ಈ ವಿಷಯಗಳು ಕಿರುಹೊತ್ತಿಗೆಯಾಗಿ ಪ್ರಕಟವಾಗುತ್ತಿರುವದೇ ಒಂದು ವಿಶೇಷ. ಈಗ ಈ ವಿಷಯಗಳಿಗೆ ಒಂದು ನಿಶ್ಚಿತ ಸ್ಥಾನದೊರಕುತ್ತದೆ.

ಶ್ರೀವಿಜಯಧ್ವಜತೀರ್ಥರು ಭಾಗವತಕ್ಕೆ ವ್ಯಾಖ್ಯಾನವನ್ನು ಮೂರು ಆವರ್ತಿ ರಚಿಸಿದರೆಂದು ಅವರ ಚರಿತ್ರೆಯಲ್ಲಿ ಉಲ್ಲೇಖವಿದೆ. ಇಷ್ಟು ಸುಧೀರ್ಘ ವಿಸ್ತಾರವಾದ ವ್ಯಾಖ್ಯಾನ ಮೂರಾವರ್ತಿ ರಚಿಸಲು ಅವರ ಸಂಪೂರ್ಣಕಾಲವು ಸಾರ್ಥಕವಾಗಿರಬೇಕು. ಅವರು ಜನಿಸಿದ್ದೇ ಈ ಕಾರ್ಯಕ್ಕೆ ಎಂದರೆ ಉತ್ಪ್ರೇಕ್ಷೆ ಆಗಲಾರದು. ಇವರ ವ್ಯಾಖ್ಯಾನವು ಭಾಗವತತಾತ್ಪರ್ಯನಿರ್ಣಯಾನುಸಾರಿಯಾದ್ದರಿಂದ ಸುಲಭವಾಗಿ ವ್ಯಾಖ್ಯಾನಕ್ಕೆ ಪ್ರಮಾಣಪದವಿ ದೊರೆತಿದೆ. ಎಲ್ಲ ಶ್ಲೋಕಗಳಿಗೂ ವ್ಯಾಖ್ಯಾನ ಮಾಡಿದ್ದಾರೆ. ಇದೊಂದು ಪ್ರೌಢ ವ್ಯಾಖ್ಯಾನ. ಗ್ರಂಥಕರ್ತರ ಅಗಾಧವಿದ್ವತ್ಪ್ರತಿಭೆ ವೇದ–ವೇದಾಂತ ಶಾಸ್ತ್ರ ಪುರಾಣ ಅನೇಕ ಪ್ರಮಾಣಾಕರ ಗ್ರಂಥಗಳು ಕರತಲಾಮಲಕವಾಗಿರಬೇಕು. ಈ ಮಹನೀಯರಿಗೆ, ಅವರ ಸಂಪೂರ್ಣ ವ್ಯಕ್ತಿತ್ವವು ಅವರ ಎಲ್ಲ ಕೃತಿಗಳಲ್ಲಿ ಪ್ರತಿಬಿಂಬಿಸಿದೆ. ಇಂಥ ಅಪೂರ್ವ ವ್ಯಾಖ್ಯಾನದ ಸಹಾಯದಿಂದ ಭಾಗವತಪುರಾಣ ಹೇಳುವದೆಂದರೆ ವಿಜಯಪತಾಕೆಯನ್ನು ಕೈಯಲ್ಲಿ ಹಿಡಿದು ಮುಂದೆ ಸಾಗಿದಂತೆಯೇ. ಶ್ರೀ ವಿಜಯಧ್ವಜ ತೀರ್ಥರೆಂಬ ಆಶ್ರಮನಾಮಧೇಯವು ಗಂಭಿರವೂ ಅನ್ವರ್ಥಕವೂ ಆಗಿದೆ. ಇವರ ಭಾಗವತವ್ಯಾಖ್ಯಾನದ ಹೆಸರು ಪದರತ್ನಾವಲಿ ಅತಿ ಸುಂದರನಾಮಧೇಯ. ಒಂದಕ್ಕೊಂದು ಪೂರಕವಾಗಿವೆ.

ಶ್ರೀನಿವಾಸ ಮಠದ ಅವರು ಶ್ರೀವಿಜಯಧ್ವಜತೀರ್ಥರ ಪರಿಚಯಾತ್ಮಕ ಕಿರುಹೊತ್ತಿಗೆಯನ್ನು ಪ್ರಕಟಿಸಲಿದ್ದಾರೆ. ಅವರೇ ವಿಜಯಧ್ವಜೀಯ ಗ್ರಂಥದ ಶೈಲಿ ಮತ್ತು ವೈಶಿಷ್ಟ್ಯಗಳನ್ನು ವಿವರಿಸಿದ್ದಾರೆ. ವಿಜಯಧ್ವಜೀಯಗ್ರಂಥಾಧ್ಯಯನದ ಸ್ಫೂರ್ತಿಯೇ ಅವರನ್ನು ಈ ಸತ್ಕಾರ್ಯಕ್ಕೆ ಪ್ರೇರಿಸಿರಬಹುದು. ಇವರು ಈಗಾಗಲೇ ಅನೇಕ ಉಪಯುಕ್ತ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರ ಈ ಸತ್ಕಾರ್ಯ ಶ್ರೀಹರಿವಾಯುಗಳ ಅನುಗ್ರಹದಿಂದಲೂ ಪ್ರೇರಣೆಯಿಂದಲೂ ಪ್ರಕಟಣೆಯ ಕಾರ್ಯವು ಮುಂದುವರಿಯಲೆಂದು ಯಶಸ್ವಿಯಾಗಲೆಂದು ಶ್ರೀಹರಿಯಲ್ಲಿ ಪ್ರಾರ್ಥನೆ.

**ಶ್ರೀಯುತ ಪಾಂಡುರಂಗಾಚಾರ್ಯ ಎಸ್. ವಾಯಿಕರ**
**ಬೆಂಗಳೂರು**

# ಎರಡು ಮಾತುಗಳು

ದುರ್ಲಭವಾಗಿ ದೊರೆತ ಮಾನವ ಜನ್ಮವನ್ನು ಹೇಗೆ ಸಾರ್ಥಕಪಡಿಸಿಕೊಳ್ಳಬೇಕು? ಯಾವುದೇ ಜನ್ಮದಲ್ಲಿಯೂ ಹೊಂದಬಹುದಾದ ಸಾಂಸಾರಿಕ ಸುಖದ ಭೋಗದಿಂದಾಗಲೀ ಒಂದಲ್ಲ ಒಂದುದಿನ ಬಿಟ್ಟು ಹೋಗಬೇಕಾದ ಭೌತಿಕ ಸಂಪತ್ತು ಪ್ರತಿಷ್ಠೆ ಮುಂತಾದವುಗಳ ಗಳಿಕೆಯಿಂದಾಗಲೀ ಮಾನವ ಜನ್ಮ ಸಾರ್ಥಕವಾಗುವುದಿಲ್ಲ. ಆಯಾ ವ್ಯಕ್ತಿಯ ಸ್ವರೂಪ ಸುಖದ ಪ್ರಾಪ್ತಿಯೇ ಸಂಸಾರ ಪಯಣದ ತಂಗುದಾಣ ಇದನ್ನು ಗಳಿಸುವುದರೆಡೆಗೆ ಗಮನ ಹರಿಸಿದರಷ್ಟೇ ಬದುಕು ಸಾರ್ಥಕವೆನಿಸಬಲ್ಲದು ಇಂತಹ ಮೋಕ್ಷಪ್ರಾಪ್ತಿಗಾಗಿ ದೇವರನ್ನು ಸಂತೋಷಪಡಿಸಿ ಅವನ ಒಲುಮೆಗೆ ಪಾತ್ರರಾಗಬೇಕಾದರೆ ಭಾಗವತಧರ್ಮಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು ಇದಕ್ಕೆ ಪೋಷಕ ಅವನ ಮಹಿಮಾಜ್ಞಾನ, ಅವನಲ್ಲಿ ಭಕ್ತಿ ಸಂಪಾದನೆ.

ಶ್ರೀಮದ್ಭಾಗವತದಲ್ಲಿ ದೇವರ ಮಹಿಮೆಗಳೂ ಹೇಳಲ್ಪಟ್ಟಿವೆ, ದೇವರ ಭಕ್ತರ ಸಾಧಕರ ಮಾಹಿತಿಯೂ ಇದೆ. ಭಾಗವತಧರ್ಮಗಳ ವಿವರಣೆಯೂ ಇದೆ. ಹೀಗೆ ಸಾಧಕನೊಬ್ಬನಿಗೆ ತನ್ನ ಬದುಕನ್ನು ಸುಸಂಸ್ಕೃತಗೊಳಿಸಲು ಬೇಕಾದ ಸ್ಫೂರ್ತಿ ಭಾಗವತದಿಂದ ದೊರಕಬಲ್ಲುದು. ಇಂತಹ ಶ್ರೀಮದ್ಭಾಗವತದ ಪ್ರತಿಯೊಂದು ಶ್ಲೋಕಕ್ಕೂ ಅರ್ಥವಿವರಿಸಿ ಕೀರ್ತಿಶಾಲಿಗಳಾದ ಶ್ರೀಶ್ರೀವಿಜಯಧ್ವಜತೀರ್ಥಶ್ರೀಪಾದಂಗಳವರಿಗೆ ಎಲ್ಲ ಸಜ್ಜನರು ಋಣಿಗಳಾಗಿರಬೇಕು. ಅವರ ಮಹಿಮಾಜ್ಞಾನವಾದಾಗ ನಮಗೆ ಭಕ್ತಿ ಹೆಚ್ಚಿ ಭಾಗವತದಲ್ಲಿ ಆಸಕ್ತಿ ಹುಟ್ಟುತ್ತದೆ.

ಶ್ರೀಶ್ರೀವಿಜಯಧ್ವಜತೀರ್ಥರ ಬಗ್ಗೆ ಹೆಚ್ಚಿನ ಮಾಹಿತಿಗಳು ಇಂದು ಅಧಿಕೃತವಾಗಿ ದೊರೆಯದಿದ್ದರೂ ದೊರೆತಷ್ಟು ವಿಷಯಗಳನ್ನು ಚೊಕ್ಕವಾಗಿ ಜೋಡಿಸಿ ವಾಕ್ಯಗಳನ್ನು ಹೆಣೆದು ಮಹದುಪಕಾರ ಮಾಡಿರುವವರು. ಮ॥ಶಾ॥ಸಂ. ಶ್ರೀನಿವಾಸ ಸು. ಮಠದ. ವಿನಯಭೂಷಿತರು, ಅತ್ಯಂತ ಸರಳ ಸ್ವಭಾವದ ವ್ಯಕ್ತಿಗಳು ಇವರ ಮಾತುಗಳನ್ನು ಆಪ್ತವಾಕ್ಯಗಳೆಂದು ಸ್ವೀಕರಿಸುವುದರಲ್ಲಿ ಯಾವ ಹಾನಿಯೂ ಇಲ್ಲ ಪ್ರತ್ಯುತ ಶ್ರೀವಿಜಯಧ್ವಜ ತೀರ್ಥರಲ್ಲಿ, ಶ್ರೀಮದ್ಭಾಗವತದ ಬಗೆಗೆ ಹೆಚ್ಚು ಗೌರವ ಬುದ್ಧಿ ಹುಟ್ಟುತ್ತದೆ. ಇಂತಹ ಅಭಿನಂದನಾರ್ಹರಾದ ಶ್ರೀಆಚಾರ್ಯರಿಗೆ ಆರ್ಥಿಕ ಬೆಂಬಲ ನೀಡಿ ಈ ಬಗೆಯ ಒಂದು ಗ್ರಂಥ ಹೊರಬರುವುದಕ್ಕೆ ಕಾರಣರಾಗಿರುವವರು ಶ್ರೀನಿವಾಸ ಭಕ್ತ ಮಂಡಳಿಯ ಸ್ಥಾಪಕ ಶ್ರೀ ಜಿ. ಮುರಳೀಧರ ಮತ್ತು ಪರಿವಾರದವರು. ಹರಿವಾಯುಗಳ ಹರಿದಾಸರ ಸೇವಾಸಕ್ತರಾದ ಇವರಿಗೆ ಇಂತಹ ಸೇವಾವಕಾಶಗಳನ್ನು ಹೆಚ್ಚು ಹೆಚ್ಚಾಗಿ ನೀಡಿ ಸೇವೆ ಸ್ವೀಕರಿಸಿ ಅನುಗ್ರಹಮಾಡಲಿ ಎಂದು ಶ್ರೀಅನುಗ್ರಹವಿಠಲನ ಅಡಿದಾವರೆಗಳಲ್ಲಿ ಕೋರುತ್ತೇನೆ.

ಇಂತು ಸಜ್ಜನ ಪಾದರೇಣು

ಖಗವರಧ್ವಜವಿಠಲದಾಸಃ ಬೆಂಗಳೂರು

# ಪ್ರಕಾಶಕರ ನುಡಿ

ಮಾಧ್ವಸಂಘ ಮತ್ತು ಮಠಗಳಲ್ಲಿ ಪುರಾಣ ಹೇಳಿಸುವುದು ಒಂದು ವಾಡಿಕೆಯಾಗಿ ಬಂದಿದೆ. ಬಹಳಷ್ಟು ಪ್ರವಚನಕಾರರು ಭಾಗವತ ಹೇಳುವಾಗ ಶ್ರೀ ವಿಜಯಧ್ವಜರ ಟೀಕೆ ಮತ್ತು ಟಿಪ್ಪಣಿಗಳನ್ನು ಪದೇ ಪದೇ ಒತ್ತುಕೊಟ್ಟು ವ್ಯಾಖ್ಯಾನಿಸುತ್ತಾರೆ. ಆದ್ದರಿಂದ ನನಗೆ ಶ್ರೀವಿಜಯಧ್ವಜತೀರ್ಥರ ಬಗ್ಗೆ ಒಂದು ವಿಶೇಷ ಆಸಕ್ತಿ ಉಂಟಾಗಿ ಅವರ ಬಗ್ಗೆ ಹೆಚ್ಚಿಗೆ ತಿಳಿಯಬೇಕೆಂಬ ಕುತೂಹಲವುಂಟಾಯಿತು. ಅವರ ಜೀವನ, ಪವಾಡ ಮತ್ತು ಅವರು ಬರೆದಿರುವ ಗ್ರಂಥಗಳ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲವೆಂದು ತಿಳಿಯಿತು.

ಈ ಕೆಲಸವನ್ನು ನನ್ನಿಂದ ಮಾಡಲಸಾಧ್ಯವೆಂದು ತಿಳಿದು, ವಿದ್ವಾನ್ ಶ್ರೀ ಶ್ರೀನಿವಾಸ ಮಠದ ಅವರನ್ನು ವಿಚಾರಿಸಲಾಗಿ ಅವರು ತತ್‌ಕ್ಷಣವೇ ಒಪ್ಪಿಕೊಂಡು ಶ್ರೀವಿಜಯಧ್ವಜರ ಬಗ್ಗೆ ಒಂದು ಕಿರುಹೊತ್ತಿಗೆಯನ್ನು ಬರೆಯಲು ಸಂತೋಷದಿಂದ ಆಗಲಿ ಎಂದರು.

ಹಲವು ವಿದ್ವಾಂಸರನ್ನು ಶ್ರೀವಿಜಯಧ್ವಜತೀರ್ಥರ ಬಗ್ಗೆ ವಿಚಾರವೇನಾದರೂ ದೊರೆಯಬಹುದೆಂದು ಸಂಪರ್ಕಿಸಿದಾಗ ಹೆಚ್ಚಿನ ಮಾಹಿತಿ ದೊರಕದಿದ್ದುದು ದುರದೃಷ್ಟ ಮತ್ತು ಹಲವು ಪುಸ್ತಕ ಭಂಡಾರಗಳನ್ನು ಭೇಟಿಮಾಡಿದಾಗ ಉತ್ತರ ಇಲ್ಲವೆಂದಾಯಿತು. ಈ ಕಾರಣಗಳಿಂದ ಶ್ರೀ ಶ್ರೀನಿವಾಸ ಮಠದರವರು ತುಂಬುಹೃದಯದಿಂದ ಈ ಕಿರು ಹೊತ್ತಿಗೆಯನ್ನು ಹೊರತಂದಿದ್ದಾರೆ. ಪೂರ್ಣ ಪ್ರಜ್ಞವಿದ್ಯಾಪೀಠದ ಶ್ರೀ ಶ್ರೀ ವಿಶ್ವೇಶತೀರ್ಥಸ್ವಾಮಿಗಳ, ಉತ್ತರಾದಿಮಠದ ಶ್ರೀ ಶ್ರೀ ಸತ್ಯಾತ್ಮತೀರ್ಥಶ್ರೀಗಳವರ ಅನುಗ್ರಹ ಸಂದೇಶಗಳನ್ನು ಈ ಕಿರುಹೊತ್ತಿಗೆ ಒಳಗೊಂಡಿದೆ. ಅಲ್ಲದೇ ನನ್ನ ಹಿತೈಷಿಗಳಾದ ಶ್ರೀ ವಾಯಿಕರ ಮತ್ತು ಶ್ರೀ ಖಗವರಧ್ವಜವಿಠಲದಾಸರೂ ಸಹ ಆಶೀರ್ವದಿಸಿ ಹರಸಿದ್ದಾರೆ. ಇವರೆಲ್ಲರಿಗೂ ನನ್ನ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು

ನನ್ನನ್ನು ಬಾಲ್ಯದಿಂದಲೂ ಉತ್ತೇಜಿಸಿ, ವಿದ್ಯೆ ಮತ್ತು ಹಲವು ಕಾರಣಗಳಿಂದ ಮುಂದೆ ಜೀವನವನ್ನು ಸಾರ್ಥಕವಾಗಿ ಬಾಳಲು ಅನುವು ಮಾಡಿಕೊಟ್ಟ ಈ ಕೆಳಗಿನ ಹಿರಿಯರಿಗೆ ನನ್ನ ಮತ್ತು ನನ್ನ ಪತ್ನಿಯ ಪರವಾಗಿ ಹೃತ್ಪೂರ್ವಕವಾದ ಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸಿ, ಈ ಕಿರುಹೊತ್ತಿಗೆಯನ್ನು ಹೊರತಂದಿರುತ್ತೇವೆ. ಅವರ ಆಶೀರ್ವಾದವೇ ನಮಗೆ ಶ್ರೀರಕ್ಷೆ. ಅದಕ್ಕೆ ಪ್ರತಿಯಾಗಿ ನಾವು ಏನನ್ನೂ ಕೊಡಲಾರೆವು. ತುಂಬು ಹೃದಯದಿಂದ ಅರ್ಪಿಸುವುದೇ ನಮ್ಮಿಂದಾಗುವ ಕೆಲಸ.

# ಲೇಖಕನ ನುಡಿ

ಬೆಂಗಳೂರಿನ ನಿವಾಸಿಗಳಾದ ಶ್ರೀಯುತ ಮುರಲೀಧರ ಅವರು ಶ್ರೀ ವಿಜಯಧ್ವಜತೀರ್ಥರ ಕುರಿತಂತೆ ಚಿಕ್ಕ ಪುಸ್ತಕವೊಂದನ್ನು ಬರೆದುಕೊಡಲು ಕೇಳಿಕೊಂಡರು. ಶ್ರೀಹರಿಯ ಪ್ರೇರಣೆಯಿಂದ ಶ್ರೀವಿಜಯಧ್ವಜತೀರ್ಥರ ಸೇವೆ ಮಾಡುವ ಇಚ್ಛೆಯಿಂದ ಒಪ್ಪಿಕೊಂಡು ಅನೇಕ ವಿಷಯಗಳನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿದ್ದೇನೆ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿ ಪೂರ್ವಕ ಸಮರ್ಪಿಸಿದ್ದೇನೆ.

ಈ ಕೃತಿಗೆ ಅನುಗ್ರಹ ಸಂದೇಶ ನೀಡಲು ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರನ್ನು ಹಾಗೂ ಶ್ರೀ ಶ್ರೀ 1008 ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರನ್ನು ಪ್ರಾರ್ಥಿಸಿದಾಗ ಅವರು ಸಂತೋಷದಿಂದ ಒಪ್ಪಿ ಅನುಗ್ರಹಿಸಿದ್ದಕ್ಕಾಗಿ ಅವರಿಗೆ ನನ್ನ ಕೃತಜ್ಞತಾಪೂರ್ವಕ ಅನಂತ ಶಿ॥ಸಾ॥ ನಮಸ್ಕಾರಗಳು

ಹಾಗೆಯೇ ಶ್ರೀಯುತ ವಾಯಿಕರ ಅವರು ಹಾಗೂ ಶ್ರೀಯುತ ಖಗವರ ಧ್ವಜವಿಠಲದಾಸರು ಈ ಕೃತಿಗೆ ಆಶೀರ್ವಚನ ನೀಡಿದ್ದಕ್ಕಾಗಿ ಅವರಿಗೆ ನನ್ನ ಶಿ॥ಸಾ॥ ನಮಸ್ಕಾರಗಳು.

ಕೃತಿ ಸಂಪಾದನ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾ ಗುರುಗಳಾದ ಶ್ರೀ ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ, ಶ್ರೀ ಪಂ॥ ಆನಂದತೀರ್ಥಾಚಾರ್ಯ ನಾಗಸಂಪಿಗೆ, ಶ್ರೀ ಪಂ॥ ರಘೂತ್ತಮಾಚಾರ್ಯ ನಾಗಸಂಪಿಗೆ, ಶ್ರೀ ಪಂ॥ ಪ್ರದ್ಯುಮ್ನಾಚಾರ್ ಪೂಜಾರ ಅವರಿಗೆ ನನ್ನ ಶಿ॥ಸಾ॥ ನಮಸ್ಕಾರಗಳು.

ಕೃತಿಯು ಹೊರಬರಲು ಸಹಾಯಮಾಡಿದ ನನ್ನ ತಮ್ಮ ಚಿ॥ ವಾದಿರಾಜ ಮಠದ, ನನ್ನ ಸುಪುತ್ರ ಚಿ॥ ಆನಂದತೀರ್ಥ ಮಠದ, ಹಾಗೂ ಶ್ರೀ ರಾಘವೇಂದ್ರ ಅಡಬಡ್ಡಿ ಅವರಿಗೆ ನನ್ನ ಆಶೀರ್ವಾದಗಳು.

ಕೃತಿಯನ್ನು ಶ್ರೀಯುತ ಮುರಲೀಧರ ಬೆಂಗಳೂರು ಅವರು ಶ್ರೀ ಶ್ರೀನಿವಾಸ ಭಕ್ತ ಮಂಡಲಿಯ ಪರವಾಗಿ ಮುದ್ರಿಸಿ ಪ್ರಕಟಿಸಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು ಸಲ್ಲುತ್ತವೆ.

ಈ ಕೃತಿಯನ್ನು ಅಂದವಾಗಿ ಮುದ್ರಣ ಮಾಡಿಕೊಟ್ಟ ಮೆ॥ ವಿಜಯ ಆಫ್‌ಸೆಟ್ ಪ್ರಿಂಟರ್ಸ ವಿಜಾಪುರ ಇವರಿಗೆ ಧನ್ಯವಾದಗಳು.

ವಿಜಾಪುರ
ದಿ.17-11-10

ಇತಿ ಸಜ್ಜನ ಸೇವಕ
ಶ್ರೀನಿವಾಸ ಸು. ಮಠದ

# ವಿಷಯಾನುಕ್ರಮಣಿಕೆ

# ಶ್ರೀವಿಜಯಧ್ವಜತೀರ್ಥರು – ಪರಿಚಯ

ಉಡುಪಿಯ ಪೇಜಾವರ ಮಠದ ಪರಂಪರೆಯ ಮೂಲಪ್ರವರ್ತಕರಾದ ಶ್ರೀಅಧೋಕ್ಷಜತೀರ್ಥರು ಶ್ರೀಮನ್ ಮಧ್ವಾಚಾರ್ಯರಿಂದ ಶ್ರೀರುಕ್ಮಿಣೀ ಸತ್ಯಭಾಮಾಸಮೇತ ಪಾಂಡುರಂಗ ವಿಠ್ಠಲನ ಪ್ರತಿಮೆಯನ್ನು ಪೂಜೆಗಾಗಿ ಪಡೆದ ಮಹಾತಪಸ್ವಿಗಳು, ಈ ಪರಂಪರೆಯಲ್ಲಿ ಬಂದ ಶ್ರೀ ಮಹೇಂದ್ರತೀರ್ಥರಿಂದ ಸಂನ್ಯಾಸ ಪದವಿಯನ್ನು ಪಡೆದು ಸರ್ವಜ್ಞ ಪೀಠವನ್ನು ಆರೋಹಣ ಮಾಡಿದ ಮಹಾತ್ಮರೇ ಶ್ರೀ ವಿಜಯಧ್ವಜತೀರ್ಥರು.[1] ಇವರಲ್ಲಿ ಶ್ರೀ ಮುಖ್ಯಪ್ರಾಣದೇವರ ವಿಶೇಷ ಸನ್ನಿಧಾನವಿತ್ತೆಂಬ ಸಂಗತಿಯು,

"ಅಂಜನಾಸೂನು ಸಾನ್ನಿಧ್ಯಾತ್ ವಿಜಯೇನ ವಿರಾಜಿತಮ್"

ಎಂಬ ಚರಮಶ್ಲೋಕದಿಂದ ವಿದಿತವಾಗುತ್ತದೆ.

ಉಡುಪಿಯಿಂದ ನಲವತ್ತೇಳು ಮೈಲು ದೂರವಿರುವ ಮಂಜೇಶ್ವರದ ಹತ್ತಿರ "ಕಣ್ವತೀರ್ಥ" ಎಂಬ ಪ್ರಾಚೀನವಾದ ಪವಿತ್ರ ಕ್ಷೇತ್ರವಿದೆ. ವಿವಿಧ ವೇದಮಂತ್ರ ದ್ರಷ್ಟಾರರಾದ ಶ್ರೀ ಕಣ್ವಮಹರ್ಷಿಗಳು ಅಖಂಡ ತಪಸ್ಸನ್ನು ಆಚರಿಸಿದ ಪುಣ್ಯ ಸ್ಥಳವಿದು. ಇಲ್ಲಿ ಕಣ್ವಮಹರ್ಷಿಗಳು ಶ್ರೀರಾಮದೇವರನ್ನು ವಿಶೇಷವಾಗಿ ನಿರಂತರ ಆರಾಧಿಸುತ್ತ ಉತ್ತಮ ಸಿದ್ಧಿಗಳನ್ನು ಪಡೆದರು. ಈ ವಿಷಯ ತಿಳಿದ ವಿಭೀಷಣನೂ ಲಂಕೆಯಿಂದ ಕಣ್ವಾಶ್ರಮಕ್ಕೆ ಬಂದು ನೆಲೆಸಿದ. ಇಂತಹ ಕಣ್ವಮಹರ್ಷಿಗಳಿಂದ ಆರಾಧಿಸಲ್ಪಟ್ಟ ಸೀತಾ ಲಕ್ಷ್ಮಣ ಸಮೇತ ಶ್ರೀರಾಮಚಂದ್ರಮೂರ್ತಿಯನ್ನು ಪೂಜಿಸಿ ಕೃತಾರ್ಥರಾಗಬೇಕೆಂದು ಶ್ರೀ ವಿಜಯಧ್ವಜತೀರ್ಥರೂ ಕಣ್ವತೀರ್ಥಕ್ಕೆ ಬಂದು ನೆಲೆಸಿದರು ಮತ್ತು ಅಲ್ಲಿ ಮುಖ್ಯ ಪ್ರಾಣನ ಪ್ರತಿಷ್ಠೆಯನ್ನು ಮಾಡಿದರು.

## ಶ್ರೀವಿಜಯಧ್ವಜತೀರ್ಥರ ಗುರುಭಕ್ತಿ

ಶ್ರೀಮದ್ ಭಾಗವತ ಟಿಪ್ಪಣಿ ರಚನೆಗೆ ಬೇಕಾದ ವ್ಯಾಕರಣ ಪಾಂಡಿತ್ಯಶಾಸ್ತ್ರಾಭ್ಯಾಸ ಇವುಗಳಿಲ್ಲದ ತಾವು ಗುರುಗಳ ಕೃಪಾಕಟಾಕ್ಷಕ್ಕೆ ಪಾತ್ರರಾಗಿರುವುದರಿಂದಲೇ ಇಂತಹ ಟಿಪ್ಪಣಿ ರಚಿಸಲು ಸಮರ್ಥರಾಗಿರುವೆವು ಎನ್ನುವ ಮಾತು

---

1) ಇವರ ಪೂರ್ವಾಶ್ರಮದ ಇತಿ ವೃತ್ತಗಳು ಎಲ್ಲಿಯೂ ದಾಖಲಾದಂತೆ ಇಲ್ಲ. ಯಾರಿಗಾದರೂ ಸಿಕ್ಕಿದರೆ ದಯವಿಟ್ಟು ನಮಗೆ ಕೊಟ್ಟರೆ ಮುಂದಿನ ಆವೃತ್ತಿಯಲ್ಲಿ ಸೇರಿಸಿಕೊಳ್ಳುತ್ತೇವೆ.

ಕ್ವ ಶಬ್ದಃ ಕ್ವಾಭ್ಯಾಸಃ ಶ್ರುತಿರಪಿಗುರೋಃ ಕ್ವಾಗ್ರಸರಣಂ
ಸಮೀಕ್ಷಾ ಪೌರಾಣಿ ಕ್ವ ಖಲು ವಿಬುಧಾ ಮತ್ಸರಧಿಯಃ।
ತಥಾಪಿ ವ್ಯಾಮೋಹಾದ್ ಗುರು ಗುರುಕಟಾಕ್ಷೈಕಶರಣೋ।
ಮನಾಗ್ ವ್ಯಾಕುರ್ವೇ ಭಾಗವತಸುಪುರಾಣಂ ಪ್ರಗಹನಮ್ ।

ಶ್ರೀಮಜ್ಜಯತೀರ್ಥರು ಶ್ರೀಮನ್ನ್ಯಾಯಸುಧಾ ಪ್ರಾರಂಭದಲ್ಲಿ ತೋರಿಸಿರುವ

ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾಃ
ನ ಚ ನ್ಯಾಯೇ ಪ್ರೌಢಾಃ ನ ಚ ವಿದಿತ ವೇದ್ಯಾ ಅಪಿ ವಯಮ್।
ಪರಂ ಶ್ರೀಮತ್ಪೂರ್ಣಪ್ರಮತಿ ಗುರುಕಾರುಣ್ಯಸರಣಿಂ
ಪ್ರಪನ್ನಾ ಮಾನ್ಯಾಸ್ಮಃ ಕಿಮಪಿ ಚ ವದಂತೋಽಪಿ ಮಹತಾಮ್॥

ಗುರುಭಕ್ತಿಯನ್ನು ಜ್ಞಾಪಿಸಿ ಕೊಡುತ್ತದೆ.

ಟಿಪ್ಪಣಿಯ ಮಧ್ಯದಲ್ಲಿ ಪ್ರಾಸಂಗಿಕವಾಗಿ ಶ್ರೀಮದಾಚಾರ್ಯರ ಪ್ರಸ್ತಾಪ ಬಂದರೆ ಅನೇಕ ವಿಶೇಷಣಗಳನ್ನು ಕೊಟ್ಟು ವರ್ಣಿಸಿ ಶ್ರೀಮದಾಚಾರ್ಯರ ಮೇಲೆ ತಮಗಿರುವ ವಿಶೇಷ ಭಕ್ತಿಯನ್ನು ಸೂಚಿಸುತ್ತಾರೆ.

ಉದಾಹರಣೆಯೊಂದನ್ನು ಇಲ್ಲಿ ಕೊಡಲಾಗಿದೆ.

ಸ ಚ ಸಕಲಸುರವರಪುರಟಮುಕುಟಪಟಲಕೋಟಿತಟಿಪರಿಘಟ್ಟಿತ ಚರಣಕಮಲಪರಾಗೈಃ ಶ್ರೀಮದ್‌ಬಾದರಾಯಣಾಂತೇವಾಸಿ ಪ್ರವರ್ಯೈಃ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೈರ್ದರ್ಶಿತ ಇತಿ – (1–2–24)

– ಈ ರೀತಿಯಾಗಿ ವರ್ಣಿಸುತ್ತಾರೆ.

## ಶ್ರೀವಿಜಯಧ್ವಜತೀರ್ಥರ ವ್ಯಾಖ್ಯಾನಶೈಲಿ

ಶ್ರೀಮದಾಚಾರ್ಯರ ಭಾಗವತತಾತ್ಪರ್ಯನಿರ್ಣಯಕ್ಕನುಗುಣವಾಗಿಯೇ ಭಾಗವತದ ಅಭಿಪ್ರಾಯವನ್ನು ತಿಳಿಸುವ ಶ್ರೀವಿಜಯಧ್ವಜತೀರ್ಥರು ಕೆಲವುಸಾರೆ ಶ್ರೀಮದಾಚಾರ್ಯರು ವರ್ಣಿಸಿರುವ ಅರ್ಥವಲ್ಲದೇ ಬೇರೆ ಅರ್ಥವನ್ನೂ ಸಿದ್ಧಾಂತಕ್ಕೆ ವಿರೋಧ ಬರದಂತೆ ನಿರೂಪಿಸಿದ್ದಾರೆ.
ಉದಾಹರಣೆ – ಭಾಗವತದ ಮೂರನೆಯ ಶ್ಲೋಕ ನಿಗಮಕಲ್ಪತರೋಃ ಇದಕ್ಕೆ ಶ್ರೀಮದಾಚಾರ್ಯರು ನಿರೂಪಿಸಿರುವಂತೆ, ವೇದವೆಂಬ ಕಲ್ಪವೃಕ್ಷದಿಂದ ವೇದವ್ಯಾಸರ

ಮೂಲಕ ಬೀಳಿಸಲ್ಪಟ್ಟ ಭಾಗವತ ಫಲವನ್ನು ಅನುಭವಿಸಿರಿ ಎಂಬ ಅರ್ಥದ ಜೊತೆಗೆ ಶುಕಾಚಾರ್ಯರು ಪರೀಕ್ಷಿದ್ರಾಜರಿಗೆ ವ್ಯಾಖ್ಯಾನಿಸಿರುವ ಭಾಗವತ ಹಣ್ಣನ್ನು ಕುಡಿಯಿರಿ ಎಂಬ ಅರ್ಥವನ್ನೂ ವ್ಯಾಖ್ಯಾನಿಸಿರುವರು. (ರಸ ಸಂಪತ್ತೇಃ ನಿವಾಸಸ್ಥಾನಂ ಭಾಗವತಂ ಫಲಂ ಪಿಬತ ಇತಿವಾ) ಆಚಾರ್ಯರಿಂದ ಹೇಳಲ್ಪಡದ ಅರ್ಥವನ್ನು ಹೇಗೆ ಸ್ವೀಕರಿಸುವುದು? ಎಂಬುದಕ್ಕೆ ಅವರೇ ಉತ್ತರ ಕೊಟ್ಟಿದ್ದಾರೆ.

> ನ ಚಾಯಮಾಚಾರ್ಯೋಽಕ್ತೋಽರ್ಥೋ ನೇತ್ಯಶ್ರದ್ಧೇಯಮ್।
> ಚತುರ್ಮುಖ ಮುಖ ಲೇಖ ಬುದ್ಧಿಗೋಚರ ಅಪರಿಮಿತಾರ್ಥ
> ಭಾಗವತತಾತ್ಪರ್ಯಾರ್ಥಂ ದರ್ಶಯತಾಂ ಪೂರ್ಣಪ್ರಮತೀನಾಮ್
> ಆಚಾರ್ಯಾಣಾಮಪ್ಯಯಂ ಕಶ್ಚಿತ್ ಬುದ್ಧಿಸಮುದ್ರಾರ್ಥ ತರಂಗ ಇತಿ
> ನಿಶ್ಚಿತ್ಯ ವಕ್ತುಂ ಶಕ್ಯತ್ವಾತ್।

ಶ್ರೀಮದಾಚಾರ್ಯರು ಭಾಗವತದ ಅನೇಕಾರ್ಥಗಳನ್ನು ತೋರಿಸಿಕೊಡಲು ಹೊರಟಿರುವುದರಿಂದ ಪ್ರಕೃತಾರ್ಥವನ್ನು ಹೇಳಲಿಲ್ಲವಾದರೂ, ಅವರ ಸಿದ್ಧಾಂತಕ್ಕೆ ವಿರುದ್ಧವಲ್ಲದ ಆ ಅರ್ಥವು ಅವರಿಗೂ ಸಮ್ಮತವೆಂದು ತಿಳಿಯಬಹುದು.

ಶ್ರೀಮದಾಚಾರ್ಯರು ಭಾಗವತದ ಎಷ್ಟೋ ಶ್ಲೋಕಗಳನ್ನು ವ್ಯಾಖ್ಯಾನಿಸಿಲ್ಲ. ಇಂತಹ ಶ್ಲೋಕಗಳಿಗೂ ಶ್ರೀಮದಾಚಾರ್ಯರ ಸಿದ್ಧಾಂತಕ್ಕೆ ಅನುಗುಣವಾಗಿ ಅರ್ಥವನ್ನು ಹೇಳಿರುವುದರಿಂದ ಅದು ಗ್ರಾಹ್ಯವೇ.

ಶ್ರೀಮದ್‌ಭಾಗವತದ ನಾಲ್ಕನೆಯ ಶ್ಲೋಕದಲ್ಲಿ ಶೌನಕಾದಿಗಳು ಸ್ವರ್ಗಲೋಕಕ್ಕಾಗಿ ಸಾವಿರ ವರ್ಷಗಳ ಕಾಲ ಯಜ್ಞವನ್ನು ಮಾಡಿದರೆಂದು ಹೇಳುತ್ತಾರೆ. ಶೌನಕಾದಿ ಜ್ಞಾನಿಗಳು ಸ್ವರ್ಗಕ್ಕಾಗಿ ಯಜ್ಞ ಮಾಡುವ ಕಾಮ್ಯಕರ್ಮಿಗಳೆನ್ನಬಹುದೇ? ಸರ್ವಥಾ ಇಲ್ಲ. ಆದ್ದರಿಂದ ಇಲ್ಲಿ ಸ್ವರ್ಗಲೋಕ ಎಂದರೆ ಪ್ರಸಿದ್ಧವಾದ ಸ್ವರ್ಗಲೋಕವಲ್ಲ. ವಿಷ್ಣುವಿಷಯಕವಾದ ಜ್ಞಾನವೇ. (ವಿಷ್ಣುವಿಷಯಜ್ಞಾನಾರ್ಥಮಿತಿ ವಾ) ಇದಕ್ಕಾಗಿ ಯಜ್ಞವನ್ನು ಆಚರಿಸಿದರು ಎಂಬುದಾಗಿ ಶ್ರೀವಿಜಯಧ್ವಜರು ವ್ಯಾಖ್ಯಾನಿಸಿರುವರು. ಹೀಗೆ ಎಲ್ಲಿಯಾದರೂ ಅಪಾರ್ಥಕ್ಕೆ ಎಡೆಯಾಗುವಂತೆ ಇದ್ದರೂ, ಅಲ್ಲಿ ಸಿದ್ಧಾಂತಕ್ಕೆ ಅನುಗುಣವಾಗಿ ವ್ಯಾಖ್ಯಾನಿಸಿ ಸ್ಪಷ್ಟೀಕರಿಸಿದ್ದಾರೆ.

ಪ್ರತಿಯೊಂದು ಹೆಸರಿಗೂ ವೈಶಿಷ್ಟ್ಯ ತೋರಿಸಿಕೊಟ್ಟಿರುವುದು ಅವರ ಇನ್ನೊಂದು ವೈಶಿಷ್ಟ್ಯವೆನ್ನಬಹುದು. ಕೃಷ್ಣ, ಗೋವಿಂದ ಮೊದಲಾದ ಭಗವಂತನ ಹೆಸರುಗಳಲ್ಲದೇ ಶುಕ, ಕಂಸ, ನಾರದ ಮೊದಲಾದವರ ಹೆಸರುಗಳಿಗೂ, ಸತ್ರ, ಮೊದಲಾದ ಪದಗಳಿಗೂ ವ್ಯುತ್ಪತ್ತಿಯನ್ನು ತೋರಿಸಿಕೊಟ್ಟಿರುವುದು ಗಮನಾರ್ಹವಾಗಿದೆ.

ಶ್ರೀಮಧ್ವಾಚಾರ್ಯರು ಅದ್ವೈತಪರ ಟೀಕಾಕಾರರ ಅಭಿಪ್ರಾಯಗಳನ್ನು ಎಷ್ಟು ಮಾರ್ಮಿಕವಾಗಿ ಖಂಡಿಸಿದ್ದಾರೆಂದು ವಿವರಿಸಿರುವುದು ಮಾತ್ರವಲ್ಲ, ತಾವು ಸ್ವತಂತ್ರವಾಗಿ ಈ ಪುರಾಣದ ಮೇಲೆ ಅದ್ವೈತಿಗಳು ಬರೆದ ಅರ್ಥವನ್ನು ಕೆದಕಿ ಅಪದ್ಧಗಳನ್ನು ಹೊರತೆಗೆಯುವಲ್ಲಿ ವಿಜಯಧ್ವಜರಿಗೆ ಅತೀ ಉತ್ಸಾಹವನ್ನು ಕಾಣುತ್ತೇವೆ. (1–1–1, 1–2–2, 1–3–32) ಇತ್ಯಾದಿಗಳಲ್ಲಿ ಕಾಣಬಹುದು. ಪದರತ್ನಾವಲಿಯಲ್ಲಿ ಹದಿನೈದಕ್ಕೂ ಹೆಚ್ಚು ಸಂದರ್ಭಗಳಲ್ಲಿ ಅದ್ವೈತಿಗಳು ಶ್ಲೋಕಗಳಿಗೆ ಬರೆದ ಅರ್ಥವನ್ನು ಉಲ್ಲೇಖಿಸಿ ಅದನ್ನು ಖಂಡಿಸಿದ ನಿದರ್ಶನಗಳಿವೆ.

ಒಮ್ಮೆ ಶ್ರೀವಿಜಯಧ್ವಜತೀರ್ಥರು ಸಮುದ್ರ ತೀರದಲ್ಲಿ ಯೋಗಮಗ್ನರಾಗಿದ್ದರು ಆಗ ಹಡಗಿನಲ್ಲಿ ಆ ದಾರಿಯಲ್ಲಿ ಹೋಗುತ್ತಿದ್ದ ಪೋರ್ಚುಗೀಸ ಮತಪ್ರಚಾರಕರು ಕುತೂಹಲದಿಂದ ಅವರನ್ನು ಹಡಗಿನಲ್ಲಿ ಏರಿಸಿಕೊಂಡು ತುಸು ದೂರ ಹೋದರು. ಆದರೆ ಅಸಂಪ್ರಜ್ಞಾತ ಸಮಾಧಿಸ್ಥರಾದ ವಿಜಯಧ್ವಜರು ಇದರ ಪರಿವೆಯೇ ಇಲ್ಲದೆ ಧ್ಯಾನಮಗ್ನರಾಗಿದ್ದರು. ಆಶ್ಚರ್ಯಭರಿತರಾದ ವಿದೇಶೀಯರು ಇವರ ಗೊಡವೆಯೇ ಬೇಡವೆಂದು ಪುನಃ ಅದೇ ಜಾಗದಲ್ಲಿ ಇವರನ್ನು ಕೆಳಗಿಳಿಸಿದರು. ಸಮುದ್ರಯಾನ ಮಾಡಿದರೆಂಬ ಕಾರಣದಿಂದ ಉಳಿದ ಅಷ್ಟಮಠಾಧೀಶರು ಇವರನ್ನು ಸ್ವೀಕರಿಸಲು ಗೊಂದಲದಲ್ಲಿ ಬಿದ್ದರು. ಅದೇ ಸಂದರ್ಭದಲ್ಲಿ ಅಲ್ಲಿಗೆ ಆಗಮಿಸಿದ ಟೀಕಾಕೃತ್ಪಾದರು ಇವರ ಮಹಿಮೆಯನ್ನು ಎಲ್ಲರಿಗೂ ತಿಳಿಸಿ ಹೇಳಿದ್ದರಿಂದ ಈ ಗೊಂದಲದ ಪರಿಹಾರ ಆಯಿತು.

ಇಂಥ ಮಹಾತಪಸ್ವಿಗಳೂ, ಜ್ಞಾನಿಶ್ರೇಷ್ಠರೂ ಆದ ಶ್ರೀವಿಜಯಧ್ವಜತೀರ್ಥರು ವೈಶಾಖ ಶುಕ್ಲ ತೃತೀಯಾ (ಅಕ್ಷಯ ತೃತೀಯಾ) ದಿನದಂದು ಶ್ರೀ ಕಣ್ವತೀರ್ಥದಲ್ಲಿ ವೃಂದಾವನಸ್ಥರಾಗಿದ್ದಾರೆ. ತಮ್ಮನ್ನು ಸೇವಿಸುವ ಭಕ್ತರ ಸಂಕಷ್ಟಗಳನ್ನು ಪರಿಹರಿಸಿ ಅವರ ಅಭೀಷ್ಟಗಳನ್ನು ಪೂರೈಸುವ ಶ್ರೀ ವಿಜಯಧ್ವಜತೀರ್ಥರು ಸಮಸ್ತ ಭಕ್ತ ವೃಂದಕ್ಕೆ ಪ್ರಾತಃಸ್ಮರಣೀಯರಾಗಿದ್ದಾರೆ.

ಶ್ರೀವಿಜಯಧ್ವಜತೀರ್ಥರ ಕಾಲವು 14ನೇ ಶತಮಾನ ಎಂಬುದಾಗಿ ತಿಳಿದು ಬರುತ್ತದೆ.

*****

18

# ಶ್ರೀವಿಜಯಧ್ವಜತೀರ್ಥರು ಭಗವಂತನಲ್ಲಿ ಬೇಡಿದ ಮೂರು ವರಗಳ ವೈಶಿಷ್ಟ್ಯ

ಶ್ರೀಮದ್ ಭಾಗವತ ಪುರಾಣಕ್ಕೆ "ಪದರತ್ನಾವಲೀ" ಎಂಬ ಸುಂದರವಾದ ಟೀಕೆಯನ್ನು ರಚಿಸಿದ ಶ್ರೀ ವಿಜಯಧ್ವಜತೀರ್ಥರು ಆ ಟೀಕೆಯನ್ನು ಭಗವಂತನಿಗೆ ಸಮರ್ಪಿಸಿ ಮೂರು ವರಗಳನ್ನು ಬೇಡಿದ್ದಾರೆ. 1) ನಿಷ್ಕಿಂಚನತಾ 2) ಪಾದಾರವಿಂದಾತ್ಮನಾ ಸಂಸಕ್ತಿ 3) ಸುಖತೀರ್ಥರ ಶಾಸ್ತ್ರರಸಪಾನ. ಇವುಗಳ ವೈಶಿಷ್ಟ್ಯವೇನೆಂಬುದನ್ನು ಇಲ್ಲಿ ವಿವರಿಸಲಾಗಿದೆ.[1]

## 1) ನಿಷ್ಕಂಚನತಾ :

ಆ ಭಗವಂತನು ತನಗೆ ಪ್ರಿಯರಾದ ಸಜ್ಜನರಿಗೆ ಸಂಪತ್ತು ಒಂದು ವೇಳೆ ಅಹಂಕಾರಕ್ಕೆ ಕಾರಣವಾಗುವಂತಿದ್ದರೆ ಅದನ್ನು ಕಸಿದುಕೊಳ್ಳುತ್ತಾನೆ. ನಿಷ್ಕಿಂಚನತೆಯನ್ನು ಅವರ ಕಲ್ಯಾಣಕ್ಕಾಗಿಯೇ ಕೊಡುತ್ತಾನೆ.

"ಬ್ರಹ್ಮನ್ ಯಮನುಗೃಹ್ಣಾಮಿ. ತದ್ವಿತ್ತಂ ವಿಧುನೋಮ್ಯಹಮ್" ಎಂಬ ಶ್ರೀಮದ್ ಭಾಗವತದ ಮಾತನ್ನು ಇಲ್ಲಿ ಸ್ಮರಿಸಬೇಕು.

ವಿತ್ತ, ವನಿತಾ ಇವೆರಡು ಮೋಹಕ್ಕೆ ಪ್ರಮುಖ ಕಾರಣಗಳು. ಶ್ರೀ ಪ್ರಹ್ಲಾದರಾಜರು "ಕೋऽನ್ವರ್ಥ ತೃಷ್ಣಾಂ ವಿಸೃಜೇತ್" ಎಂದಿರುವಂತೆ ಧನದಾಸೆಯನ್ನು ತ್ಯಜಿಸುವದು ಬಹಳ ದುಷ್ಕರವಾದುದು. ಸೇವಕರು, ಕಳ್ಳರು, ವ್ಯಾಪಾರಿಗಳು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಹಣ ಗಳಿಸಲು ಪ್ರಯತ್ನಿಸುವರು. ಸಾತ್ವಿಕ ಜನರು ಬಡತನವಿದ್ದರೂ ಆ ಭಗವಂತನಲ್ಲಿ ಸಮ್ಯಕ್ ಭಕ್ತಿಯುಳ್ಳವರಾಗಿ ಅವನನ್ನೇ ಸ್ಮರಣೆ ಮಾಡುತ್ತ ಇರುತ್ತಾರೆ. ನಿಷ್ಕಿಂಚನತೆಯು ಭಗವಂತನ ಸ್ಮರಣೆಗೆ ಸಾಧನವೇ ಆಗುತ್ತದೆ ಅಂಥವರಿಗೆ. ಭಗವಂತನು " ನಿಷ್ಕಿಂಚನಜನಪ್ರಿಯ" ನಾದ್ದರಿಂದ ಶ್ರೀವಿಜಯಧ್ವಜತೀರ್ಥರು ಅದನ್ನೇ ವರವನ್ನಾಗಿ ಬೇಡಿದ್ದಾರೆ.

---

1) ವ್ಯಾಖ್ಯಾ ಭಾಗವತಸ್ಯ ಕೃಷ್ಣರಚಿತಾ ತ್ವತ್ಪ್ರೀತಿಕಾಮಾತ್ಮನಾ
ಪ್ರೀತಶ್ಚೇತ್ ಪ್ರದದಾಸಿ ತತ್ಪ್ರತಿನಿಧಿಂ ತತ್ತ್ರೀನ್ ವರಿಷ್ಯೇವರಾನ್।
ಪ್ರಾಙ್ನಿಷ್ಕಿಂಚನತಾಂ ತವ ಪ್ರತಿಭವಂ ಪಾದಾರವಿಂದಾತ್ಮನಾಂ
ಸಂಸಕ್ತಿಂ ಸುಖತೀರ್ಥಶಾಸ್ತ್ರವಿಜರಾಹಾರಸ್ಯ ಪಾನಂ ಸದಾ॥
(ದ್ವಾದಶಸ್ಕಂಧ ಟೀಕಾ ಕೊನೆಯಲ್ಲಿ)

"ನಿಷ್ಕಿಂಚನತಾಪರಪರ್ಯಾಯಂ ವೈರಾಗ್ಯಂ" ಎಂದಿರುವಂತೆ "ನಿಷ್ಕಿಂಚನತಾ" ಶಬ್ದದಿಂದ "ವೈರಾಗ್ಯ" ಎಂಬ ಅರ್ಥವನ್ನು ಕೂಡ ಗ್ರಹಿಸಬಹುದು. ಇದು ಅಪೇಕ್ಷಣೀಯವೇ ಆಗಿದೆ.

## 2) ಪಾದಾರವಿಂದಾತ್ಮನಾ ಸಂಸಕ್ತಿ :

ಭಗವಂತನ ಪಾದಾರವಿಂದಗಳಲ್ಲಿ ಭಕ್ತಿಯುಳ್ಳ ಸಜ್ಜನರ ಸಹವಾಸವು ಅವಶ್ಯವೇ ಆಗಿದೆ. ಅಸಜ್ಜನರಲ್ಲಿ ಮಾಡಿದ ಸಂಗವು ಸಂಸಾರ ಬಂಧನಕ್ಕೆ ಕಾರಣವಾಗುತ್ತದೆ. "ಸ ಏವ ಸಾಧುಷು ಕೃತೋ ನಿಸ್ಸಂಗತ್ವಾಯ ಕಲ್ಪತೇ" ಉಕ್ತಿಯಂತೆ ಸಜ್ಜನರಲ್ಲಿ ಮಾಡಿದ ಸಂಗವು ಮುಕ್ತಿಗೆ ಕಾರಣವಾಗುತ್ತದೆ. ಶ್ರೀಕೃಷ್ಣ ನಾರದರ ಸಂವಾದ ರೂಪವಾದ ಆಖ್ಯಾನದಿಂದ ಸತ್ಸಂಗದ ಫಲವು ಎಂತಹದು ಎಂಬುದನ್ನು ನಿರೂಪಿಸಲಾಗಿದೆ. ನಾರದರ ಅತ್ಯಲ್ಪ ಕಾಲದ ಸಮಾಗಮದ ಫಲವಾಗಿ ಓತಿಕ್ಯಾತವು (ಓತಿಕಾಟವು) ಗಿಳಿ ಜನ್ಮವನ್ನು, ಗಿಳಿಯು ರಾಜಪುತ್ರನ ಜನ್ಮವನ್ನು ಹೊಂದಿದ ವಿಷಯವು ಇದಕ್ಕೆ ನಿದರ್ಶನವಾಗಬಲ್ಲದು.

"ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಮ್" ಎಂಬ ಶ್ರೀಮದ್ ಭಾಗವತೋಕ್ತಿಯಂತೆ ಸಂಸಾರದಲ್ಲಿ ಸಜ್ಜನರ ಸಹವಾಸವು ಅರ್ಧ ಕ್ಷಣವಾದರೂ ಅದು ದೊಡ್ಡ ನಿಧಿಯಿದ್ದಂತೆ. ಅಂದರೆ ಬಹುಕಾಲ ಸಜ್ಜನರನ್ನು ಸೇವಿಸಿ ಸಂಪಾದಿಸಿದ ಅನುಗ್ರಹವು ಭಕ್ತಿದ್ವಾರಾ ಪರಮಪುರುಷಾರ್ಥಸಾಧನವಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ.

## 3) ಸುಖತೀರ್ಥರಶಾಸ್ತ್ರರಸಪಾನ :

ಪ್ರತಿಜನ್ಮದಲ್ಲಿಯೂ ಶ್ರೀಮದಾನಂದತೀರ್ಥರ ಶಾಸ್ತ್ರದಲ್ಲಿರುವ ಅಮೃತ ರಸದ ಆಸ್ವಾದನೆಯು ಆಗಲಿ ಎಂಬುದಾಗಿ ಕೇಳಿಕೊಂಡಿದ್ದಾರೆ. ಸಮುದ್ರ ಮಥನದಿಂದ ಉದ್ಭವಿಸಿದ ಅಮೃತಕ್ಕಿಂತ ಶ್ರೀಮಧ್ವಶಾಸ್ತ್ರ ಮಥನದಿಂದ ಲಭ್ಯವಾಗುವ ಭಗವನ್ಮಾಹಾತ್ಮ್ಯವೆಂಬ ಅಮೃತವು ಮೋಕ್ಷಕ್ಕೆ ಕಾರಣವಾದ್ದರಿಂದ ಮಹತ್ತರವಾದದ್ದು. ಇದನ್ನೇ ತಾವು ಮೂರನೆಯ ವರವಾಗಿ ಆ ಭಗವಂತನಲ್ಲಿ ಬೇಡಿ ಪಡೆದಿದ್ದಾರೆ.

ಶ್ರೀವಿಜಯಧ್ವಜತೀರ್ಥರು ಬೇಡಿ ಪಡೆದ ಅದೇ ಮೂರು ವರಗಳನ್ನು ಆ ಭಗವಂತನು ನಮ್ಮೆಲ್ಲರಿಗೂ ಅನುಗ್ರಹಿಸಲೆಂದು ನಾವು ಕೂಡ ಪ್ರಾರ್ಥಿಸುತ್ತಿರಬೇಕು.

*****

## 20
# ಶ್ರೀವಿಜಯಧ್ವಜತೀರ್ಥರ ಕೃತಿಗಳು

ಶ್ರೀವಿಜಯಧ್ವಜತೀರ್ಥರು ಒಟ್ಟು ನಾಲ್ಕು ಕೃತಿಗಳನ್ನು ರಚಿಸಿದ್ದಾರೆ. 1) ಶ್ರೀಮದ್‌ಭಾಗವತಕ್ಕೆ "ಪದರತ್ನಾವಲೀ" ಟೀಕೆ. 2) ಯಮಕ ಭಾರತಕ್ಕೆ ಟೀಕೆ. 3) ದಶಾವತಾರ ಹರಿಗಾಥಾಸ್ತೋತ್ರ. 4) ಕೃಷ್ಣಾಷ್ಟಕ.

## 1) ಶ್ರೀಮದ್ಭಾಗವತಕ್ಕೆ "ಪದರತ್ನಾವಲೀ" ಟೀಕೆ

ಶ್ರೀಮದ್‌ಭಾಗವತಕ್ಕೆ ಶ್ರೀವಿಜಯಧ್ವಜತೀರ್ಥರು ಬರೆದ ವಿಸ್ತೃತ ವ್ಯಾಖ್ಯಾನ ಗ್ರಂಥವೇ "ಪದರತ್ನಾವಲೀ". ಇದು ಭಾಗವತದ ಮಾಧ್ವ ಟಿಪ್ಪಣಿಗಳ ಪೈಕಿ ಪ್ರಾಯಃ ಮೊದಲಿನದಾಗಿರಬೇಕು. ಆದ್ದರಿಂದಲೇ ಮಾಧ್ವ ಸಂಪ್ರದಾಯದಲ್ಲಿ ವಿಜಯಧ್ವಜೀಯಕ್ಕೆ ವಿಶೇಷ ಸ್ಥಾನಮಾನಗಳುಂಟು.

ಟಿಪ್ಪಣಿಕಾರರ ಹೆಸರಿಗೆ ಸಂಬಂಧಿಸಿದಂತೆ "ವಿಜಯುಧ್ವಜೀಯು" ಎಂಬುದಾಗಿಯೇ ಟಿಪ್ಪಣಿಯ ಹೆಸರು ಪ್ರಸಿದ್ಧವಾಗಿರುವುದಾದರೂ ಶ್ರೀ ವಿಜಯಧ್ವಜರು ಟಿಪ್ಪಣಿಗೆ ಇಟ್ಟ ಹೆಸರು "ಪದರತ್ನಾವಲೀ" ಎಂದಿದೆ. ಶ್ರೀ ವಿಜಯಧ್ವಜರು ಪ್ರತಿಸ್ಕಂಧದ ಕೊನೆಯಲ್ಲಿ ಟಿಪ್ಪಣಿಯನ್ನು ಭಗವಂತನಿಗೆ ಅರ್ಪಿಸುವಾಗ ಟಿಪ್ಪಣಿಯನ್ನು "ಪದರತ್ನಾವಲೀ" ಎಂದೇ ಹೆಸರಿಸಿದ್ದಾರೆ.

ದ್ವಿತೀಯಸ್ಕಂಧಗಾ ಹ್ಯೇಷಾ ಪದರತ್ನಾವಲೀ ಮಯಾ।

ಸ್ವರ್ಪಿತಾ ಪದರತ್ನಾವಲೀ ನಾಮ ತೃತೀಯಸ್ಕಂಧ ಪ್ರಕಾಶಿನೀ ।

ಇತ್ಯಾದಿ ಹೇಳುತ್ತ ಪ್ರಥಮಸ್ಕಂಧದ ಕೊನೆಯಲ್ಲಿ ಮಾತ್ರ "ಭಾಗವತ ವಿವರಣ"ಎಂದು ಕರೆದಿದ್ದಾರೆ.

ಭಾಗವತ ವಿವರಣಂ ಇದಂ ತುಲಸೀದಲಮಿವ ಸಮರ್ಪಯಾಮಿ ಹರೇಃ॥

ಆದರೆ ಉಳಿದೆಲ್ಲ ಕಡೆಗೂ ಪದರತ್ನಾವಲೀ ಎಂದೇ ಹೆಸರಿಸಿರುವುದರಿಂದ ಈ ಟಿಪ್ಪಣಿಗೆ "ಪದರತ್ನಾವಲೀ" ಎಂಬುದೇ ಶ್ರೀ ವಿಜಯಧ್ವಜರಿಗೆ ಸಮ್ಮತವಾದ ಹೆಸರು ಎಂಬುದಾಗಿ ತಿಳಿಯಬೇಕು. ಭಾಗವತದ ಟಿಪ್ಪಣಿ ಎಂಬ ಅರ್ಥದಲ್ಲಿ ಮಾತ್ರ ಭಾಗವತ ವಿವರಣ ಎಂದು ಪ್ರಥಮಸ್ಕಂಧದ ಕೊನೆಯಲ್ಲಿ ಕರೆಯಲಾಗಿರಬಹುದು.

ಶ್ರೀವಿಜಯಧ್ವಜತೀರ್ಥರ ಪದರತ್ನಾವಲಿಯು ಶ್ರೀಸತ್ಯಧರ್ಮತೀರ್ಥರು, ಶ್ರೀ ಸುಧೀಂದ್ರರು, ಶ್ರೀಯಾದವಾರ್ಯರು, ಶ್ರೀವ್ಯಾಸತತ್ವಜ್ಞರೇ ಮೊದಲಾದ ಎಲ್ಲ ಮಾಧ್ವ ಟಿಪ್ಪಣಿಕಾರರಿಗೆ ಮಾರ್ಗದರ್ಶಕವಾಗಿದೆ. ವಿವಿಧ ಶ್ರುತಿ ವಾಕ್ಯಗಳ, ಅನೇಕ ಪುರಾಣ ವಾಕ್ಯಗಳ ಸಂವಾದದಿಂದ ಸಹಜವಾದ ವಿಶಿಷ್ಟಾರ್ಥಗಳನ್ನು ಸ್ಪಷ್ಟಪಡಿಸುವ ಈ ವ್ಯಾಖ್ಯಾನ ಗ್ರಂಥ ಭಕ್ತ ಜಿಜ್ಞಾಸುಗಳಿಗೆ ಅಲೌಕಿಕವಾದ ಆನಂದವನ್ನು ಕೊಡುತ್ತದೆ. ಇದರಿಂದಾಗಿ ಈ ವ್ಯಾಖ್ಯಾನವು ಅತಿಮಧುರವಾದ ಅಮೃತರಸಾಯನದಂತೆ ಇರುವುದರಲ್ಲಿ ಸಂದೇಹವಿಲ್ಲ.

## ಪದರತ್ನಾವಲೀ ರಚಿಸುವಾಗ ನಡೆದ ಘಟನೆ :

ಶ್ರೀವಿಜಯಧ್ವಜತೀರ್ಥರು ಕಣ್ವತೀರ್ಥದ ಮಠದಲ್ಲಿ ವಾಸಿಸುತ್ತ ಪಾಠ, ಪ್ರವಚನ, ಗ್ರಂಥ ಲೇಖನ ಕಾರ್ಯಗಳನ್ನು ಮಾಡುತ್ತಿದ್ದರು. ಒಮ್ಮೆ ಅವರು ಟಿಪ್ಪಣಿ ರಚಿಸುತ್ತಿದ್ದಾಗ ಮಠದೊಳಗೆ ವಿಪರೀತ ಸೆಖೆ ಇತ್ತು. ಇದರಿಂದ ಮನಸ್ಸು ಏಕಾಗ್ರತೆ ಹೊಂದಲಾರದು. ಲೇಖನಿ ನಿರರ್ಗಳವಾಗಿ ಹರಿಯಲಾರದು. ಹೀಗಾಗಿ ಮಠದ ಎದುರು ಬೆಳೆದು ನಿಂತ ಅಶ್ವತ್ಥ ವೃಕ್ಷದ ಅಡಿಯಲ್ಲಿ ಬಂದು ಕುಳಿತರು. ಬರವಣಿಗೆಯನ್ನು ಮುಂದುವರೆಸಿದರು. "ಶ್ರೇಯಾಂಸಿ ಬಹುವಿಘ್ನಾನಿ" ಉಕ್ತಿಯಂತೆ ಶ್ರೇಯಸ್ಕರ ಕಾರ್ಯಗಳಿಗೆ ಮತ್ತೆ ಮತ್ತೆ ವಿಘ್ನಗಳು ಬರುತ್ತವೆ. ಮಠದೊಳಗೆ ಸೆಖೆಯೆಂದು ಹೊರಬಂದು ಕೂತರೆ ಮತ್ತೊಂದು ವಿಘ್ನ. ಅಶ್ವತ್ಥ ವೃಕ್ಷದ ಚಂಚಲ ಎಲೆಗಳ ಕಿಲಕಿಲ ಶಬ್ದ ಕೋಲಾಹಲದಿಂದ ಮನಸ್ಸಿನ ಏಕಾಗ್ರತೆ ಉಂಟಾಗಲಿಲ್ಲ. ಗ್ರಂಥದ ಐಕಾತ್ಮ್ಯವನ್ನು ಪಡೆಯದಿದ್ದರೆ ಮೂಲ ಗ್ರಂಥಕಾರರ ಅಭಿಪ್ರಾಯಕ್ಕೆ ಅಪಚಾರವಾಗದಂತೆ ಟಿಪ್ಪಣಿ ರಚಿಸುವುದು ಕಷ್ಟಸಾಧ್ಯ. ತತ್‌ಕ್ಷಣ ಶ್ರೀಗಳವರು ತಮ್ಮ ಕೈಯೆತ್ತಿ ಅಶ್ವತ್ಥವೃಕ್ಷಕ್ಕೆ ಶಬ್ದ ಮಾಡದಿರುವಂತೆ ಸೂಚನೆ ನೀಡಿದರು. ತನ್ನ ಬುಡದಲ್ಲಿ ಕುಳಿತು ಟಿಪ್ಪಣಿ ರಚಿಸುತ್ತಿರುವುದರ ಬಗ್ಗೆ ಅಭಿಮಾನ ಆನಂದಕ್ಕೊಳಗಾಗಿಯೋ ಎಂಬಂತೆ ಹರ್ಷೋದ್ಗಾರವನ್ನು ವ್ಯಕ್ತಪಡಿಸುತ್ತಿರುವಂತೆ ಎಲೆಗಳನ್ನು ಕುಣಿಸುತ್ತಿರುವ ಅಶ್ವತ್ಥವೃಕ್ಷ ಇದ್ದಕ್ಕಿದ್ದಂತೆಯೇ ಸ್ತಬ್ಧವಾಯಿತು. ಎಲೆಗಳು ನಿಶ್ಚೇಷ್ಟವಾದವು. ಬರವಣಿಗೆ ಮುಂದುವರಿಯಿತು. ಯಶಸ್ವಿಯಾಗಿ ಪೂರ್ಣಗೊಂಡು ಶ್ರೀ ಭಾಗವತ ಟಿಪ್ಪಣಿ ಪ್ರಸಿದ್ಧಿಗೆ ಬಂದಿತು.

ಇದು ಶ್ರೀವಿಜಯಧ್ವಜತೀರ್ಥರು ಶ್ರೀಮದ್‌ಭಾಗವತ ಟಿಪ್ಪಣಿ ರಚಿಸುವಾಗ ನಡೆಯಿತೆನ್ನಲಾಗುವ ಒಂದು ಘಟನೆ ಕಣ್ವತೀರ್ಥದ ಎದುರು ಈಗಲೂ "ಅಜರಾಮರ" ನಂತೆ ವಿರಾಜಿಸುತ್ತಿರುವ ಅಶ್ವತ್ಥವೃಕ್ಷವೇ ಭಾಗವತ ಟಿಪ್ಪಣಿ ಬರೆಯಲು ಶ್ರೀಗಳಿಗೆ ಆಸರೆ ನೀಡಿದ ವೃಕ್ಷ ಎಂದು ಹೇಳಲಾಗುತ್ತದೆ.

**2) ಯಮಕ ಭಾರತ ಟೀಕೆ** – ಶ್ರೀವಿಜಯಧ್ವಜತೀರ್ಥರಿಂದ ರಚಿತವಾದ ಇದು ಮಧ್ವಮುನಿಸೇವಾ ಸಂಘ ಉಡುಪಿ ಇವರಿಂದ ಪ್ರಕಟವಾಗಿದೆಯೆಂದು ತಿಳಿದುಬರುತ್ತದೆ.

**3) ದಶಾವತಾರ ಹರಿಗಾಥಾಸ್ತೋತ್ರ** – ಶ್ರೀವಿಜಯಧ್ವಜತೀರ್ಥರಿಂದ ರಚಿತವಾಗಿರುವ ಇದು ಭಗವಂತನ ದಶಾವತಾರಗಳನ್ನು ವರ್ಣಿಸುವ ಸುಂದರ ಸ್ತೋತ್ರ, ಇದನ್ನು ಪೂರ್ತಿಯಾಗಿ ಮುಂದಿನ ಪುಟಗಳಲ್ಲಿ ಕೊಡಲಾಗಿದೆ.

**4) ಕೃಷ್ಣಾಷ್ಟಕಮ್** – ಇದು ಕೂಡ ಶ್ರೀವಿಜಯಧ್ವಜತೀರ್ಥರಿಂದ ರಚಿತವಾದ ಸ್ತೋತ್ರ – ಈ ಕೃತಿ ಸದ್ಯಕ್ಕೆ ಉಪಲಬ್ಧವಾಗಿಲ್ಲ.

*****

23

# ಶ್ರೀವಿಜಯಧ್ವಜತೀರ್ಥರ ವ್ಯಾಖ್ಯಾನ ಕೌಶಲ

I)

ಶ್ರೀವೇದವ್ಯಾಸರ ಪುತ್ರರಾದ ಶುಕಾಚಾರ್ಯರು ಯದೃಚ್ಛೆಯಿಂದ ಪರೀಕ್ಷಿನ್ಮಹಾರಾಜರು ಪ್ರಾಯೋಪವೇಶಕ್ಕೆ ಕುಳಿತ ಸ್ಥಳಕ್ಕೆ ಬರುತ್ತಾರೆ. ಈ ವಿಷಯವನ್ನು ಶ್ರೀಮದ್ ಭಾಗವತ ಪ್ರಥಮಸ್ಕಂಧದ ಕೊನೆಯ ಅಧ್ಯಾಯದಲ್ಲಿ ವರ್ಣಿಸುತ್ತ –

ತತ್ರಾಭವದ್ ಭಗವಾನ್ ವ್ಯಾಸಪುತ್ರೋ
ಯದೃಚ್ಛಯಾ ಗಾಮಟಮಾನೋಽನಪೇಕ್ಷಃ ॥ (1–20–1)

ಈ ಶ್ಲೋಕ ಭಾಗದಲ್ಲಿ ಶ್ರೀ ಶುಕಾಚಾರ್ಯರಿಗೆ "ಅನಪೇಕ್ಷಃ" ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಈ ವಿಶೇಷಣಕ್ಕೆ ಶ್ರೀವಿಜಯಧ್ವಜತೀರ್ಥರು ನಾಲ್ಕು ಮಜಲಿನ ಅರ್ಥಗಳನ್ನು ತಿಳಿಸಿಕೊಟ್ಟು ಮಹೋಪಕಾರ ಮಾಡಿದ್ದಾರೆ.

1) ಬಾಹ್ಯ ವಿಷಯಾಪೇಕ್ಷಾರಹಿತಃ ಅನಪೇಕ್ಷಃ ।
ಬಾಹ್ಯವಿಷಯಗಳಲ್ಲಿ ಅಪೇಕ್ಷೆರಹಿತರಾದವರು

2) ಅನಪಃ ಪ್ರಾಣನಾಥಃ ಶ್ರೀವಿಷ್ಣುಃ ತದ್ವಿಷಯಾ ಈಕ್ಷಾ ಈಕ್ಷಣಂ ದರ್ಶನಂ ಯಸ್ಯಸಃ ಅನಪೇಕ್ಷಃ।
ಪ್ರಾಣದೇವರಿಗೆ ಸ್ವಾಮಿಯಾದ ಶ್ರೀವಿಷ್ಣುವಿನಲ್ಲಿಯೇ ನೋಟವುಳ್ಳವರು.

3) ಅನಂ ಪ್ರಾಣಂ ಪಿಬತೀತ್ಯನಪಾ ಈಕ್ಷಾದರ್ಶನಂ । ಕಾಕೋದರವತ್ ಚಂಚುಪುಟೇನ ವಾಯುಪಾನ ಜ್ಞಾನಂ ಯಸ್ಯಾಸ್ತಿ ಸ ತಥಾ ಅನಪೇಕ್ಷಃ ।
ಸರ್ಪದಂತೆ ನಾಲಿಗೆಯಿಂದ ವಾಯುವನ್ನು ಪಾನ ಮಾಡುವ ಜ್ಞಾನವುಳ್ಳವರು

4) ಸ್ವಸ್ಮಾದಪಗತಾ ನ ಭವತೀತ್ಯನಪಾ ಲಕ್ಷ್ಮೀ ತಸ್ಯಾಃ ಈಕ್ಷಣಂ ಯಸ್ಯಾಸ್ತಿ ಸ ತಥಾ ಅನಪೇಕ್ಷಃ।
ಯಾವಾಗಲೂ ಬಿಟ್ಟು ಹೋಗದಿರುವ ಲಕ್ಷ್ಮೀದೇವಿಯರ ಕಟಾಕ್ಷವುಳ್ಳವರು.

II)

ಶ್ರೀಮದ್ ಭಾಗವತದಲ್ಲಿ ಆ ಭಗವಂತನ ಸ್ವರೂಪವನ್ನು ವಿವರಿಸುತ್ತ ಶ್ರೀ ಶುಕ ಮಹಾಮುನಿಗಳು "ಚಿತ್ರಂ ತದ್ಭಗವತ್ಪದಮ್" (1–6–10)
ಎಂಬಂತೆ ಭಗವಂತನಿಗೆ "ಚಿತ್ರಂ" ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಇದಕ್ಕೆ ಶ್ರೀವಿಜಯಧ್ವಜತೀರ್ಥರು ತಮ್ಮ "ಪದರತ್ನಾವಲಿ" ಟೀಕೆಯಲ್ಲಿ ಆರು ಮಜಲಿನ ಅರ್ಥ ವಿಶೇಷಗಳನ್ನು ತಿಳಿಸಿಕೊಟ್ಟಿದ್ದಾರೆ.

1) ಚಿತ್ರಮ್ – ಆಶ್ಚರ್ಯರೂಪಮ್।

ಆಶ್ಚರ್ಯರೂಪವುಳ್ಳವನಾದ್ದರಿಂದ ಭಗವಂತನಿಗೆ "ಚಿತ್ರ" ನೆಂದು ಹೆಸರು ಅಥವಾ ಚಿತ್ರಯತಿ ಇತಿ ಚಿತ್ರಮ್ ।

ಆಶ್ಚರ್ಯವನ್ನುಂಟುಮಾಡುವವನಾದ್ದರಿಂದ ಭಗವಂತನಿಗೆ "ಚಿತ್ರ" ನೆಂದು ಹೆಸರು ಇಲ್ಲಿ "ವಿಸ್ಮಯೋಽದ್ಭುತಮಾಶ್ಚರ್ಯಂ ಚಿತ್ರಮ್" ಎಂಬ ಅಮರಕೋಶದ ಉಕ್ತಿಯನ್ನು ಇಲ್ಲಿ ನೆನೆಸಿಕೊಳ್ಳಬಹುದು.

2) ಚಿತ್ರಮ್ – ಅವಿಮಿಶ್ರಿತ ಜ್ಞಾನಾತ್ಮಕಮ್ ।

ಸಂಶಯ, ವಿಪರೀತ, ಸಂದೇಹಾದಿಗಳಿಂದ ರಹಿತವಾದ ಜ್ಞಾನವುಳ್ಳವನಾದ್ದರಿಂದ ಭಗವಂತನಿಗೆ "ಚಿತ್ರ" ನೆಂದು ಹೆಸರು.

3) ಚಿತ್ರಮ್ – ಚೇತನಂ ಜೀವಂ ತ್ರಾಯತ ಇತಿ ।

ಚೇತನನೆನಿಸಿದ ಜೀವನನ್ನು ರಕ್ಷಿಸುವವನಾದ್ದರಿಂದ ಭಗವಂತನಿಗೆ "ಚಿತ್ರ"ನೆಂದು ಹೆಸರು.

4) ಚಿತ್ರಮ್ – ಚಿತ್–ಜ್ಞಾನಂ, ತನೋತಿ ರಾತಿ ಜ್ಞಾನಿನಾಂ ಜ್ಞಾನಂ ಬಹುಲೀಕರೋತಿ ತದೇಷಾಂ ದದಾತಿ ಗುರುಮುಖೇನೇತಿ ವಾ।

ಜ್ಞಾನಿಗಳ ಜ್ಞಾನವನ್ನು ವಿಸ್ತರಿಸುವವನು. ಅಥವಾ ಇತರರಿಗೆ ಗುರುಮುಖೇನ ಜ್ಞಾನವನ್ನು ಕೊಡುವವನಾದ್ದರಿಂದ ಭಗವಂತನಿಗೆ "ಚಿತ್ರ"ನೆಂದು ಹೆಸರು.

5) ಚಿತ್ರಮ್ – ಚಿತ್ತರತಂ ಇತಿ ।

ಎಲ್ಲ ಜೀವರ ಮನಸ್ಸಿನಲ್ಲಿ ಇರುವವನು.

ಸ ಹಿ ಸರ್ವ ಮನೋವೃತ್ತಿ ಪ್ರೇರಕಃ ಸಮುದಾಹೃತಃ।

ಈ ಉಕ್ತಿಯಂತೆ ಎಲ್ಲ ಜೀವರ ಮನಸ್ಸಿನಲ್ಲಿದ್ದು ಪ್ರೇರಣೆ ನೀಡುವವನಾದ್ದರಿಂದ ಭಗವಂತನಿಗೆ "ಚಿತ್ರ"ನೆಂದು ಹೆಸರು.

6) ಚಿತ್ರಮ್ – ಚಿನೋತೀತಿ ಚಿತ್

ಚೇತಾ– ಸ್ರಷ್ಟಾ ಬ್ರಹ್ಮಾ ತಂ ತರತಿ ಅತೀತ್ಯ ವರ್ತತೇ ಇತಿ। ಅಥವಾ ತನೋತಿ ಸೃಜತಿ ರಮಯತಿ ತಸ್ಮಾದುತ್ತಮಮ್ ಇತಿ।

ಸೃಷ್ಟಿಕರ್ತರಾದ ಬ್ರಹ್ಮದೇವರನ್ನು ಅತಿಕ್ರಮಿಸಿ ಇರುವವನು, ಅಥವಾ ಸೃಷ್ಟಿ ಮಾಡುವ ಮತ್ತು ರಮಿಸುವ ಆದ್ದರಿಂದಲೇ ಉತ್ತಮನೆನೆಸಿದ್ದರಿಂದ ಭಗವಂತನಿಗೆ "ಚಿತ್ರ" ನೆಂಬ ಹೆಸರು ಸಾರ್ಥಕವೇ ಸರಿ.

III)

ಅಜಾಮಿಲ – ಶಬ್ದಾರ್ಥವನ್ನು ಎರಡು ರೀತಿಯಿಂದ ತಿಳಿಸುತ್ತಾರೆ (6–1–21)

ವಿಜಯಧ್ವಜೀಯ ವ್ಯಾಖ್ಯಾನ– ಅಜಯಾ ಪ್ರಕೃತ್ಯಾ ಜ್ಞಾನಸ್ಯ ಮೀಲೊ ಮೀಲನಂ ತಿರೋಭಾವೋಯಸ್ಯ ಸ ತಥಾ॥

ಪ್ರಕೃತಿಯಿಂದ ಜ್ಞಾನದ ತಿರೋಭಾವ ಉಳ್ಳವನು ಯಾವನೋ ಅವನು ಅಜಾಮಿಲ.

ಅಥವಾ

ಅಜಾತ್ ಹರೇಃ ಪೂರ್ವಪುಣ್ಯಸಂಪನ್ನ ಜ್ಞಾನಸ್ಯ ಮೀಲಃ ಉನ್ಮೀಲನಂ ಯಸ್ಯ ಸ ತಥಾ ॥

ಜನನವಿಲ್ಲದ ಶ್ರೀಹರಿಯಿಂದ, ಪೂರ್ವಪುಣ್ಯದಿಂದ ಹೊಂದಿದ ಜ್ಞಾನದ ವಿಕಾಸವುಳ್ಳವನು ಯಾವನೋ ಅವನು ಅಜಾಮಿಲ

IV)

ನಮಃ ಕೃಷ್ಣಾಯ ರಾಮಾಯ ವಸುದೇವಸುತಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ಸಾತ್ವತಾಂ ಪತಯೇ ನಮಃ ॥ (10–14–45)

ವಿಜಯಧ್ವಜೀಯ ವ್ಯಾಖ್ಯಾನ– ಕೃಷ್ಣಾಯ ಉತ್ಕೃಷ್ಟಾನಂದರೂಪಾಯ, ಭಕ್ತ ಜನದುರಿತಕರ್ಷಣಶೀಲಾಯ ವಾ ಶತ್ರೂಣಾಮಗ್ನಯೇ ವಾ, ನೀಲವರ್ಣಾಯ ವಾ, ಕೃಷ್ಣಃ ಸೀಸಾದ್ಯಲೋಹೇಷು ಮೃಗೇ ನೀಲೇ ಕಲೌ। ಶೂದ್ರೇ ಕಾಕೇ ಪಿಕೇ ವ್ಯಾಸೇ ಧ್ವಾಂತೇ ಪಕ್ಷೇಽರ್ಜುನೇ ಹರೌ। ಇತ್ಯಭಿಧಾನಮ್ । ರಾಮಾಯ ರಾಮನಾಮ್ನೇ ಅಭಿರಾಮಾಯ ವಾ। ಪ್ರಕೃಷ್ಟಂ ದ್ಯುಮ್ನಂ ಬಲಂ ಯಸ್ಯಸ ತಥಾ ತಸ್ಮೈ। ದಿವಿ ಮ್ನಾಯತ ಇತಿ ವ್ಯುತ್ಪತ್ಯಾ ದ್ಯುಮ್ನಂ ಯಶಃ। ಮ್ನಾ ಅಭ್ಯಾಸೇ ಇತಿ ಧಾತುಃ। ಪ್ರಕೃಷ್ಟ ಯಶಸೇ ಇತಿ ಚ। ಹಿರಣ್ಯಂ ದ್ರವಿಣಂ ದ್ಯುಮ್ನಂ ಇತ್ಯಭಿಧಾನಾತ್ ಪ್ರಕೃಷ್ಟ ಸುವರ್ಣಾಯ ಚ। ಕೇನಾಪಿ ರುದ್ಧೋ ನ ಭವತೀತ್ಯನಿರುದ್ಧಃ ತಸ್ಮೈ । ಅನಿನಾ ಮುಖ್ಯಪ್ರಾಣೇನ ನಾನೋಪಾಸನಾ ಪ್ರಾಚುರ್ಯೇಣ ಸ್ವಹೃದಿ ಸದಾ ರುದ್ಧ್ಯತ ಇತಿ ಚ ॥

ಇಲ್ಲಿ ಕೃಷ್ಣ, ರಾಮ, ಪ್ರದ್ಯುಮ್ನ, ಅನಿರುದ್ಧ ಶಬ್ದಗಳಿಗೆ ಅನೇಕಾರ್ಥಗಳನ್ನು ತಿಳಿಸಿದ್ದಾರೆ.

ಕೃಷ್ಣ – ಉತ್ಕೃಷ್ಟ ಆನಂದರೂಪನಾದ
– ಭಕ್ತಜನರ ಪಾಪಗಳನ್ನು ಸೆಳೆಯುವ ಸ್ವಭಾವವುಳ್ಳ
– ಶತ್ರುಗಳಿಗೆ ಅಗ್ನಿಯಂತಿರುವ
– ನೀಲವರ್ಣದವನಾದ

ರಾಮ – ರಾಮ ಹೆಸರುಳ್ಳ
– ಸುಖಸ್ವರೂಪನೆನಿಸಿದ

ಪ್ರದ್ಯುಮ್ನ – ಪ್ರಕೃಷ್ಟವಾದ ಬಲವುಳ್ಳ
– ಪ್ರಕೃಷ್ಟವಾದ ಯಶವುಳ್ಳ
– ಪ್ರಕೃಷ್ಟವಾದ ಬಣ್ಣವುಳ್ಳ

ಅನಿರುದ್ಧ – ಯಾರಿಂದಲೂ ತಡೆಯಲಾಗದ
– ಮುಖ್ಯಪ್ರಾಣನಿಂದ ನಾನಾ ರೀತಿಯ ಉಪಾಸನೆಯಿಂದ
– ಹೃದಯದಲ್ಲಿ ಯಾವಾಗಲೂ ಬಂಧಿತನಾದ

*****

# ಶ್ರೀವಿಜಯಧ್ವಜತೀರ್ಥ ವಿರಚಿತ ದಶಾವತಾರಸ್ತೋತ್ರ

ಪ್ರಲಯೋದನ್ವದುದೀರ್ಣ ಜಲ ವಿಹಾರಾನಿಮಿಷಾಂಗಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 1

ಚರಮಾಂಗೋದ್ಧೃತ ಮಂದರತಟಿನಂ ಕೂರ್ಮಶರೀರಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 2

ಸಿತದಂಷ್ಟ್ರೋದ್ಧೃತ ಕಾಶ್ಯಪತನಯಂ ಸೂಕರರೂಪಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 3

ನಿಶಿತಪ್ರಾಗ್ರ್ಯನಖೇನ ಜಿತಸುರಾರಿಂ ನರಸಿಂಹಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 4

ತ್ರಿಪದವ್ಯಾಪ್ತ ಚತುರ್ದಶ ಭುವನಂ ವಾಮನ ರೂಪಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 5

ಕ್ಷಪಿತಕ್ಷತ್ರಿಯ ವಂಶನಗಧರಂ ಭಾರ್ಗವರಾಮಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 6

ದಯಿತಾಚೋರ ನಿಬರ್ಹಣನಿಪುಣಂ ರಾಘವರಾಮಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 7

ಮುರಳೀನಿಸ್ವನ ಮೋಹಿತವನಿತಂ ಯಾದವಕೃಷ್ಣಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 8

ಪಟುಚಾಟೀಕೃತ ನಿಸ್ಫುಟ ಜನನಂ ಶ್ರೀಘನಸಂಜ್ಞಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 9

ಪರಿನಿರ್ಮೂಲಿತ ದುಷ್ಟಜನಕುಲಂ ವಿಷ್ಣುಯಶೋಜಮ್ ।
ಕಮಲಾಕಾಂತಮಖಂಡಿತವಿಭವಾಬ್ಧಿಂ ಹರಿಮೀಡೇ ॥ 10

ಅಕೃತೇಮಾಂ ವಿಜಯಧ್ವಜವರತೀರ್ಥೋ ಹರಿಗಾಥಾಮ್ ।
ಅಯತೇ ಪ್ರೀತಿಮಲಂ ಸಪದಿ ಯಯಾ ಶ್ರೀರಮಣೋಽಯಮ್ । 11

****

28

# ಶ್ರೀವಿಜಯಧ್ವಜತೀರ್ಥ ವಿರಚಿತ
# ಮಂಗಲದ್ವಾದಶೀ ಶ್ಲೋಕಗಳು

ಶ್ರೀವಿಜಯಧ್ವಜತೀರ್ಥರು ರಚಿಸಿರುವ ಶ್ರೀಮದ್ ಭಾಗವತ ಪದರತ್ನಾವಲೀ ಟೀಕೆಯ ಪ್ರತಿಸ್ಕಂಧದ ಪ್ರಾರಂಭದಲ್ಲಿ / ಕೊನೆಯಲ್ಲಿ ಒಂದೊಂದು ಶ್ಲೋಕ ರಚಿಸಿದ್ದು ಅದರಲ್ಲಿ ಆಯಾ ಸ್ಕಂಧಗಳ ವಿಷಯಗಳನ್ನು ಸೂಚ್ಯವಾಗಿ ಹೇಳಿದ್ದಾರೆ. ಇವುಗಳಿಗೆ "ಮಂಗಲದ್ವಾದಶೀ" ಎಂದು ಕರೆಯುವದುಂಟು.

ಓಂ ಯತೋ ಜನ್ಮಾದ್ಯಸ್ಯ ಶ್ರುತಿಸುನಯಮಾನೈಕವಿಷಯಾತ್
ಸ್ವತಂತ್ರಸ್ತಂತ್ರಜ್ಞೋ ಗುರುರಪಿ ಗುರೋರ್ಯಶ್ಚ ಜಗತಾಮ್ ।
ವಿಮೂಢಾ ಯತ್ತತ್ತ್ವಂ ಪ್ರಕಟಮಿಹ ವೇತ್ತುಂ ಸುಮನಸೋ
ಮುಕುಂದಂ ಧ್ಯಾಯೇಮಾಪಹತಕುಹಕಂ ತಂ ಸ್ವಮಹಸಾ ॥ 1 ॥

ವರೀಯಾನ್ ಪ್ರಷ್ಟವ್ಯೋ ನಿಗಮವಿಷಯೋ ಯೋಽಸ್ಯ ಜನಕೋ
ವರಾಹಾದ್ಯಾತ್ಮಾ ಯೋಽವತರತಿ ಸುರಾರಾತಿಹೃತಯೇ।
ಅದಾದ್ಧಾತ್ರೇ ಜ್ಞಾನಂ ಸಕಲವಿಷಯಂ ಯಶ್ಚ ವಿನುತ
ಸ್ತಮಂಗೋಪಾಸ್ವತ್ವಂ ಹೃದಯ ಸತತಂ ಸ್ವೇಷ್ಟಕೃತಯೇ ॥ 2 ॥

ಯಲ್ಲೀಲಾ ಜಲರಾಶಿಲೋಲಲಹರೀಸ್ನಾನಕ್ಷಮಾಣಾಂ ನೃಣಾಂ
ಸಂಸಾರೋದಧಿರಾಶು ಶುಷ್ಯತಿತರಾಮಗ್ನ್ಯುಪ್ತ ಶುಷ್ಕೈಂಧವತ್ ।
ಯಸ್ಮಾದ್ವಿಶ್ವಮಶೇಷಮುದ್ಭವತಿ ಯಸ್ತತ್ವಂ ಪರಂ ಯೋಗಿನಾಂ
ಶ್ರೀಮಂತಂ ತಮುಪಾಸ್ಮಹೇ ಸುಮನಸಾಮಿಷ್ಟಪ್ರದಂ ವಿಠ್ಠಲಮ್ ॥ 3 ॥

ಪಶುಪತಿರಪಿ ಪ್ರೇಕ್ಷಾದಕ್ಷೋ ಯತೋಽಗಮದುನ್ನತಿಂ
ಸಕಲಜನತಾವಂದ್ಯಂ ಸ್ಥಾನಂ ಧ್ರುವೋ ಯದನುಗ್ರಹಾತ್ ।
ಪೃಥುರಥ ಮಹೀದೋಹಾತ್ ಕೀರ್ತಿಂ ಶುಭಾಂ ಸಮಪೀಪಲ
ತ್ತಮಿಮಮಜಿತಂ ವಂದಾರೂಣಾಮಮಂದಮುದಂ ನುಮಃ ॥ 4 ॥

ಪ್ರಭವತಿ ಜಗದೇತದ್ ಯತ್ಕಟಾಕ್ಷೇ ಕ್ಷಣೇನ
ಸ್ಥಿತಯತಿ ಯದುಪೇಕ್ಷಾಲೇಶತೋ ನಾಶಮೇತಿ ।
ಗತಮಗತಮಭಿಜ್ಞಾ ಜಾನತೇ ಯಸ್ಯವೃತ್ತಂ
ಶರಣಮಿಮಮಯೇಽಹಂ ಕಾಲಸಂಜ್ಞಂ ಮುಕುಂದಮ್ ॥ 5 ॥

ಭವಭಯಜಟಾಂ ಘೋರಾಂ ಯಸ್ಯಾಭಿಧಾನಮಘಚ್ಛಿದೋ
ದಲಯತಿ ನೃಣಾಂ ಸದ್ಯಃ ಸಂಕೀರ್ತಿತಂ ಸ್ಖಲನಾದಿಷು ।
ಅಹಿರಿಪುರಹೇರ್ಹತ್ಯಾದ್ಯಂಹೋ ಜಹೌ ಹಿ ಯದರ಼್ಯಾ
ಶರಣಮನಿಶಂ ಶಾಂತಂ ಕಾಂತಂ ನಮಾಮಿ ಮುರದ್ವಿಷಮ್ ॥ 6 ॥

ಅಸ್ತಾವಿ ಶ್ರುತಿಮಸ್ತಕೇನ ಮನುನಾ ಸ್ವಾಯಂಭುವೇನಾಪಿ ಯೋ
ಯೇನಾರಕ್ಷಿ ಜಗತ್ತ್ರಯಂ ಚ ಮುನಿಭಿಃ ಸ್ವಾತ್ಮಾನುವಿದ್ಧಾತ್ಮಭಿಃ ।
ಯೇನಾಮೋಚಿ ಗಜಾಧಿಪಃ ಕ್ರಕಚವಚ್ಚಕ್ರೇಣ ನಕ್ರಾನನಾತ್
ಕ್ಷೀರಾಂಭೋಧಿರಮಂಥಿ ಯೇನ ಧೃತಭೂಃ ಸೋಽಯಂ ಹರಿಃ ಪಾತುನಃ ॥ 7 ॥

ಯೇನಾಧಾರಿ ಗಿರಿಃ ಪಪೇ ಚ ವಿಭುಧೈಃ ಯೇನಾಮೃತಂ ಪ್ರೇರಿತೈಃ
ಯೇನಾತಾಪಿ ಸುರದ್ವಿಷಾಂ ಚ ಹೃದಯಂ ಶರ್ವೋಽಪ್ಯಮೋಹಿ ಸ್ತ್ರಿಯಾ ।
ಯೇನಾಮಾಯಿ ಜಗಂತ್ಯಬಂಧಿ ಚ ಬಲಿಃ ಯೇನಪ್ಯದಾಯಿ ಶ್ರುತಿಃ
ಧಾತ್ರೇ ಯೇನ ನಿಹತ್ಯ ಮತ್ಸ್ಯವಪುಷಾ ದೈತ್ಯಂ ತಮೀಡೇ ಹರಿಮ್ ॥ 8 ॥

ಯೋಽಯಾಚಿ ತ್ರಿದಶೈಃ ಕುಭಾರಹೃತಯೇಽವಾತಾರಿ ಯೇನಕ್ಷಿತೌ
ಜಘ್ನೇ ಯೇನ ಸುರಾಸುಹೃತ್ಸಮುದಯೋ ಯೇನ ತ್ರಿಲೋಕ್ಯಾಪಿ ಸಾ ।
ಯೇನಾಧಾಯಿ ಯುಧಿಷ್ಠಿರೋ ನಿಜಪದೇ ಧರ್ಮೋಽಪಿ ಯೇನಾಂಕುರಿ
ಶ್ರೀಕೃಷ್ಣಂ ತಮಕೃಷ್ಣಕೃಷ್ಣದಯಿತಂ ವಂದಾಮಹೇ ಸಂತತಮ್ ॥ 9 ॥

ಜಯತಿ ಜಗತಿ ಜನ್ಮಾದ್ಯಸ್ಯ ವಿಶ್ವಸ್ಯ ಯಸ್ಮಾ
ದಮಲನಿಗಮಮುಖ್ಯಾವೇದ್ಯಮಾಹಾತ್ಮ್ಯಧಾಮ ।
ದ್ರುಹಿಣತನಯ ಊಚೇ ಶೌರಯೇ ಯತ್ಸ್ವರೂಪಂ
ಯದುಪತಿರಪಿ ಯಾಸ್ಯನ್ನುದ್ಧವಾಯ ಸ್ವಧಾಮ ॥ 10 ॥

ಯತ್ತತ್ತ್ವಂ ನಿಗಮೋಽಪಿ ವಕ್ತುಮನಲಂ ಶಾಖೇಂದುವಲ್ಲಕ್ಷಿತಂ
ಬ್ರಹ್ಮಾದ್ಯಾಃ ಕಿಮುತಾವಲಂಬವಿಧುರಾ ನಿರ್ದೋಷಚಿತ್ತಾ ಅಪಿ ।
ಅಪ್ಯೇವಂ ಜಲವೇಗ ವನ್ಮತಿಗತೇರೇಷಾಂ ಸದೈಕಂ ಪದಂ
ತದ್‌ಬ್ರಹ್ಮಾಖ್ಯಮಖಂಡಬುದ್ಧಿಹೃದಯಾ ವಾಸಂ ಪ್ರವಂದೇ ಪರಮ್ ॥ 11 ॥

ಸತ್ಯಂಜ್ಞಾನಮನಂತಮಚ್ಯುತಮಜಂ ನಿರ್ದುಃಖ ಸೌಖ್ಯೋದಧಿಂ
ನಿರ್ದೋಷಾಮಿತವೇದವೇದಿತಮಹಂ ವಂದೇ ಮುಕುಂದಂ ಸದಾ ।
ಯದ್ಭಕ್ತ್ಯಾ ಕಮಲಾಬ್ಜಜೇರಗಿರಿಶಾನಂತಾದಿದೇವಾಃ ಪದಂ
ಸಾಯುಜ್ಯಂ ಪ್ರಸರಂತ್ಯನೇಕವಿಧಯಾ ಸತ್ಯಾ ವಿರತ್ಯಾ ಚ ತಮ್ ॥ 12 ॥

****

# ಶ್ರೀವಿಜಯಧ್ವಜತೀರ್ಥರ ಸ್ತೋತ್ರ

ಅಂಜನಾಸೂನುಸಾನ್ನಿಧ್ಯಾದ್ ವಿಜಯೇನ ವಿರಾಜಿತಮ್ ।
ಅಜಿತಪ್ರೀತಿಜನಕಂ ಭಜೇಽಹಂ ವಿಜಯಧ್ವಜಮ್ ॥ 1

ಶ್ರೀವಿಜಯಧ್ವಜಯೋಗಿಯತೀಶಂ
ನೌಮಿ ನಿರಂತರ ಮಾನಮಿತಾಂಗಃ ।
ವಾದಿ ಮದೇಭ ವಿದಾರಣದಕ್ಷಂ
ವ್ಯಾಕೃತ ಭಾಗವತಂ ಪರಮಾಪ್ತಮ್ ॥ 2

ಜಯವಿಜಯೌ ದಂಡಧರೌ ಭೂಯೋ ಭೂಯೋಽಭಿವಾದಯೇ ಮೂರ್ಧ್ನಾ ।
ಭಾಗವತೀ ಟೀಕಾ ಯಾಽಸೌ ವರ್ಣ್ಯಂತಃ ಪ್ರವೇಷ್ಟುಮೇತಸ್ಯಾಃ ॥ 3

ಮಧ್ವಾಧೋಕ್ಷಜಸಂಪ್ರದಾಯಕ ಮಹಾಶಾಸ್ತ್ರಾರ್ಥ ಸಂವ್ಯಂಜಕಃ
ಶ್ರೀಮದ್ ಭಾಗವತಾಂಬುಧೌ ವ್ಯವಹರನ್ ತಾತ್ಪರ್ಯರತ್ನಾವಲೀಮ್ ।
ದೃಷ್ಟ್ವಾ ಭಾಗವತಾರ್ಥ ದೀಪ್ತ ಪದಕೈಃ ಶ್ರೀಕೃಷ್ಣ ಪಾದಾರ್ಚನಂ
ಮಾತ್ಯಾಕ್ಷೀದ್ ವಿಜಯಧ್ವಜಂ ಭಜ ಮನಸ್ತಂ ಕಣ್ವತೀರ್ಥಸ್ಥಿತಮ್ ॥ 4

ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ ।
ಭಜೇ ಮಹೇಂದ್ರ ಸತ್ ಶಿಷ್ಯಂ ಯೋಗೀಂದ್ರಂ ವಿಜಯಧ್ವಜಮ್ ॥ 5

ಸರ್ವದುರ್ವಾದಿ ಮಾತಂಗದಲನೇ ಸಿಂಹವಿಕ್ರಮಮ್ ।
ವಂದೇ ಯತಿಕುಲಾಗ್ರಣ್ಯಂ ಯೋಗೀಂದ್ರಂ ವಿಜಯಧ್ವಜಮ್ ॥ 6

ಮಧ್ವಾರಾಧಿತ ಸೀತೇತರಾಮಚಂದ್ರಪದಾಂಬುಜೇ ।
ಚಂಚರೀಕಾಯಿತಂ ವಂದೇ ಯೋಗೀಂದ್ರ ವಿಜಯಧ್ವಜಮ್ ॥ 7

ಶ್ರೀಮದ್ಭಾಗವತಾಭಿಧಾನಸುರಭಿರ್ಯಟ್ಟೀಕಯಾ ವತ್ಸಯಾ
ಸೃಷ್ಟ್ವಾ ಶ್ಲೋಕ ಪಯೋಧರೈರ್ನಿಜಮಹಾಭಾವಂ ಪಯಃ ಪ್ರಸ್ನುತೇ ।
ಲೋಕೇ ಸಜ್ಜನ ತಾಪ ಸಂಪ್ರಶಮನಾಯೋದೀರಿತಂ ಸೂರಿಭಿಃ
ಶ್ರೀಮಂತಂ ವಿಜಯಧ್ವಜಂ ಮುನಿವರಂ ತಂ ಸನ್ನಮಾಮ್ಯನ್ವಹಮ್ ॥ 8

ಇತಿ ಶ್ರೀಮದ್ವಿಶ್ವಪತಿತೀರ್ಥ ವಿರಚಿತಾ
ಶ್ರೀಮದ್ವಿಜಯಧ್ವಜತೀರ್ಥಸ್ತುತಿಃ ಸಮಾಪ್ತಾ –

# ಶ್ರೀಪೇಜಾವರ ಮಠದ ಗುರುಪರಂಪರೆಯ ಶ್ಲೋಕಗಳು*

ಸುಮಾರು 200–250 ವರ್ಷಗಳಷ್ಟು ಪ್ರಾಚೀನವಾದ ತಾಡವಾಲೆ ಗ್ರಂಥವು ಪೇಜಾವರ ಮಠದಲ್ಲಿದೆ. ಅದರ ಪ್ರಕಾರ ಪ್ರಾರಂಭದಿಂದ 25 ಯತಿಗಳ ಹೆಸರು ಹೀಗಿವೆ.

ಶ್ರೀಮಂತಂ ಕಮಲಾಕಾಂತ ಸಂತತಧ್ಯಾನ ತತ್ಪರಮ್ ।
ಅಧೋಕ್ಷಜಮುನಿಂ ಶಾಂತಂ ವಂದೇ ವಿಠ್ಠಲಪೂಜಕಮ್ ॥ 1

ಕಮಲೇಶಲಸತ್ ಪಾದಕಮಲಾರ್ಪಿತಮಾನಸಮ್ ।
ಕಮಲಾಕ್ಷಾಖ್ಯಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 2

ಪೂರ್ಣಪ್ರಜ್ಞಮತಾಂಬೋಧಿ ಪೂರ್ಣಚಂದ್ರನಿಭಂ ಗುರುಮ್ ।
ಪುಷ್ಕರಾಕ್ಷಂ ಗುಣೋದೀರ್ಣಂ ವಂದೇ ವಿಠ್ಠಲಪೂಜಕಮ್ ॥ 3

ಶಂಭುಮುಖ್ಯಾಮರಸ್ತುತ್ಯ ಶ್ರೀಕೃಷ್ಣಚರಣಾರ್ಚಕಮ್ ।
ಅಮರೇಂದ್ರಾಖ್ಯ ಹಂಸೇಂದ್ರಂ ವಂದೇ ವಿಠ್ಠಲಪೂಜಕಮ್ ॥ 4

ಮಹೇಂದ್ರಾವರಜಂ ಕೃಷ್ಣಂ ಪೂಜಯಂತಂ ಸುಭಕ್ತಿತಃ ।
ಮಹೇಂದ್ರಾಹ್ವಯ ಯೋಗೀಂದ್ರಂ ವಂದೇ ವಿಠ್ಠಲ ಪೂಜಕಮ್ ॥ 5

ಶ್ರೀಮದ್‌ಭಾಗವತಾರ್ಥಾಬ್ಜಮಿಹಿರಂ ಸರ್ವದಿಗ್ ಜಯಮ್ ।
ವಿಜಯಧ್ವಜಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 6

ಪುರುಷೋತ್ತಮಪಾದಾಬ್ಜಸೇವಾಯಾಂ ತತ್ಪರಂ ಸದಾ ।
ಉತ್ತಮಾಖ್ಯಯತಿಶ್ರೇಷ್ಠಂ ವಂದೇ ವಿಠ್ಠಲಪೂಜಕಮ್ ॥ 7

ಧೀಮತ್ ಸುಭೂಸುರಾಭೀಷ್ಟ ಚಿಂತಾಮಣಿಮಘೋಜ್ಝಿತಮ್ ।
ಚಿಂತಾಮಣಿಯತಿಶ್ರೇಷ್ಠಂ ವಂದೇ ವಿಠ್ಠಲಪೂಜಕಮ್ ॥ 8

ದಾಮೋದರ ಪದಾಂಭೋಜಧ್ಯಾನಧೂತಮಲಾಶಯಮ್ ।
ದಾಮೋದರ ಪರಿವ್ರಾಜಂ ವಂದೇವಿಠ್ಠಲಪೂಜಕಮ್ ॥ 9

---

* ಶ್ರೀ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರಿಂದ ಸಂಪಾದಿತ

ವಾಸುದೇವಾಂಘ್ರಿಕಮಲಯುಗಳೇ ಭ್ರಮರಾಯಿತಮ್ ।
ವಾಸುದೇವಾಹ್ವಯಂ ಭಿಕ್ಷುಂ ವಂದೇವಿಠ್ಠಲಪೂಜಕಮ್ ॥ 10

ದುರ್ವಾದಿಮತ್ತಮಾತಂಗ ಕುಂಭಭೇದಿ ಮೃಗಾಧಿಪಮ್ ।
ವಾದೀಂದ್ರಯತಿ ನೇತಾರಂ ವಂದೇ ವಿಠ್ಠಲಪೂಜಕಮ್ ॥ 11

ವೇದಶಾಸ್ತ್ರಪುರಾಣಾಬ್ಧಿನಿಶಾಕರನಿಭಂ ಗುರುಮ್ ।
ಶ್ರೀಮಂತಂ ವೇದಗರ್ಭಾಖ್ಯಂ ವಂದೇ ವಿಠ್ಠಲಪೂಜಕಮ್ ॥ 12

ಕಲಿವರ್ಣ್ಯಾವರಶ್ಲೋಕಂ ಪ್ರಾಜ್ಞಮೌಲಿಂ ಬುಧಾಶ್ರಯಮ್ ।
ಸದಣುಪ್ರಜ್ಞಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 13

ವಿಶ್ವಪ್ರಜ್ಞಲಸಚ್ಛಾಸ್ತ್ರಂ ಸುಪ್ರಜ್ಞಾನಂದವಾರಿಧಿಮ್ ।
ವಿಶ್ವಪ್ರಜ್ಞಾಹ್ವಯಂ ಭಿಕ್ಷುಂ ವಂದೇ ವಿಠ್ಠಲಪೂಜಕಮ್ ॥ 14

ವಿಜಿತಾಹಿತಷಡ್‌ವರ್ಗಂ ವಿಶುದ್ಧಜ್ಞಾನಸಂಯುತಮ್ ।
ವಿಜಯಾಹ್ವಯ ಸತ್ತೀರ್ಥಂ ವಂದೇ ವಿಠ್ಠಲಪೂಜಕಮ್ ॥ 15

ವಿಶ್ವೋದ್ಭವಸ್ಥಿತಿಲಯಕಾರಣೇ ತತ್‌ಪರಂ ಹರೌ ।
ವಿಶ್ವೇಶ್ವರಾಖ್ಯ ಹಂಸೇಂದ್ರಂ ವಂದೇ ವಿಠ್ಠಲಪೂಜಕಮ್ ॥ 16

ವೀತದೋಷಂ ಬುಧಸಭಾಭೂಷಣಂ ಭುವನಪ್ರಿಯಮ್ ।
ವಿಶ್ವಭೂಷಣಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 17

ವಿದ್ವಜ್ಜನೈಃ ಸದಾವಂದ್ಯಂ ವಿಪುಲಾಭಿಖ್ಯಯಾಯುತಮ್ ।
ವಿಶ್ವವಂದ್ಯಾಹ್ವಯಂ ಭಿಕ್ಷುಂ ವಂದೇ ವಿಠ್ಠಲಪೂಜಕಮ್ ॥ 18

ರಾಜರಾಜಸಮಂ ನಿತ್ಯಮೌದಾರ್ಯಗುಣವಾರಿಧಿಮ್ ।
ವಿದ್ಯಾರಾಜಪರಿವ್ರಾಜಂ ವಂದೇ ವಿಠ್ಠಲಪೂಜಕಮ್ । 19

ಶ್ರೀಮದ್‌ವಿಠ್ಠಲಸನ್ಮೂರ್ತಿ ಸಂತತ ಸ್ಮರಣೋಜ್ಜ್ವಲಮ್ ।
ವಿಶ್ವಮೂರ್ತ್ಯಾಖ್ಯಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 20

ಸಾಧುಲೋಕತಮೋಧ್ವಂಸಂ ಮಧ್ವಚಂದ್ರ ಮುದಾವಹಮ್ ।
ವಿಶ್ವಪತ್ಯಾಖ್ಯಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 21

ವಿಶ್ವಶಾಸ್ತ್ರಪುರಾಣಜ್ಞಂ ವಿಷ್ವಗ್ವ್ಯಾಪ್ತಯಶೋವೃತಮ್ ।
ವಿಶ್ವನಿಧ್ಯಾಖ್ಯಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 22

ತಂತ್ರಸಾರೋಕ್ತಸನ್ಮಂತ್ರಜಪವ್ಯಾಖ್ಯಾನಕೌಶಲಮ್ ।
ವಿಶ್ವಾಧೀಶಾಖ್ಯ ಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 23

ವೈರಾಗ್ಯಭಕ್ತ್ಯನಶನತಪಃ ಪ್ರಾಭವ ವೈಭವಮ್ ।
ವಿಶ್ವಾಧಿರಾಜಯೋಗೀಂದ್ರಂ ವಂದೇ ವಿಠ್ಠಲಪೂಜಕಮ್ ॥ 24

ಬ್ರಹ್ಮರಾಕ್ಷಸ ಭೂತಾದಿ ಪ್ರೋಚ್ಚಾಟನ ವಿಚಕ್ಷಣಮ್ ।
ವಿಶ್ವಬೋಧಗುರುಂ ನಿತ್ಯಂ ವಂದೇ ವಿಠ್ಠಲಪೂಜಕಮ್ ॥ 25

## ಶ್ರೀ ಪೇಜಾವರಮಠದ ಯತಿಶ್ರೇಷ್ಠರ ಹೆಸರುಗಳು

1) ಶ್ರೀ ಅಧೋಕ್ಷಜತೀರ್ಥರು
2) ಶ್ರೀ ಕಮಲಾಕ್ಷತೀರ್ಥರು
3) ಶ್ರೀ ಪುಷ್ಕರಾಕ್ಷತೀರ್ಥರು
4) ಶ್ರೀ ಅಮರೇಂದ್ರತೀರ್ಥರು
5) ಶ್ರೀ ಮಹೇಂದ್ರತೀರ್ಥರು
6) ಶ್ರೀ ವಿಜಯಧ್ವಜತೀರ್ಥರು
7) ಶ್ರೀ ಉತ್ತಮತೀರ್ಥರು
8) ಶ್ರೀ ಚಿಂತಾಮಣಿತೀರ್ಥರು
9) ಶ್ರೀ ದಾಮೋದರತೀರ್ಥರು
10) ಶ್ರೀ ವಾಸುದೇವತೀರ್ಥರು
11) ಶ್ರೀ ವಾದೀಂದ್ರತೀರ್ಥರು
12) ಶ್ರೀ ವೇದಗರ್ಭತೀರ್ಥರು
13) ಶ್ರೀ ಅಣುಪ್ರಜ್ಞತೀರ್ಥರು
14) ಶ್ರೀ ವಿಶ್ವಪ್ರಜ್ಞತೀರ್ಥರು
15) ಶ್ರೀ ವಿಜಯತೀರ್ಥರು
16) ಶ್ರೀ ವಿಶ್ವೇಶ್ವರತೀರ್ಥರು
17) ಶ್ರೀ ವಿಶ್ವಭೂಷಣತೀರ್ಥರು
18) ಶ್ರೀ ವಿಶ್ವವಂದ್ಯತೀರ್ಥರು
19) ಶ್ರೀ ವಿದ್ಯಾರಾಜತೀರ್ಥರು

20) ಶ್ರೀ ವಿಶ್ವಮೂರ್ತಿತೀರ್ಥರು
21) ಶ್ರೀ ವಿಶ್ವಪತಿ ತೀರ್ಥರು
22) ಶ್ರೀ ವಿಶ್ವನಿಧಿತೀರ್ಥರು
23) ಶ್ರೀ ವಿಶ್ವಾಧೀಶತೀರ್ಥರು
24) ಶ್ರೀ ವಿಶ್ವಾಧಿರಾಜತೀರ್ಥರು
25) ಶ್ರೀ ವಿಶ್ವಬೋಧತೀರ್ಥರು

ಇಲ್ಲಿಗೆ ಪ್ರಾಚೀನ ದಾಖಲೆಯ ಗುರು ಪರಂಪರೆಯು ಮುಗಿಯುತ್ತದೆ. ಅನಂತರ ಅರ್ವಾಚೀನ ದಾಖಲೆಗಳಲ್ಲಿ ಕಂಡುಬರುವಂತೆ ಯತಿಗಳ ಹೆಸರು ಈ ರೀತಿಯಾಗಿವೆ.

26) ಶ್ರೀ ವಿಶ್ವವಲ್ಲಭತೀರ್ಥರು
27) ಶ್ರೀ ವಿಶ್ವಪ್ರಿಯತೀರ್ಥರು
28) ಶ್ರೀ ವಿಶ್ವವರ್ಯತೀರ್ಥರು
29) ಶ್ರೀ ವಿಶ್ವರಾಜತೀರ್ಥರು
30) ಶ್ರೀ ವಿಶ್ವಮನೋಹರತೀರ್ಥರು
31) ಶ್ರೀ ವಿಶ್ವಜ್ಞತೀರ್ಥರು
32) ಶ್ರೀ ವಿಶ್ವಮಾನ್ಯತೀರ್ಥರು
33) ಶ್ರೀ ವಿಶ್ವೇಶತೀರ್ಥರು (ಈಗಿರುವ ಪೀಠಾಧಿಪತಿಗಳು)

ಹಾಗೂ ಶ್ರೀ ವಿಶ್ವಪ್ರಸನ್ನತೀರ್ಥರು ಕಿರಿಯ ಪಟ್ಟದ ಸ್ವಾಮಿಗಳಾಗಿದ್ದಾರೆ.

*****

# ಶ್ರೀವಿಜಯಧ್ವಜತೀರ್ಥರ ನಾಮ ನಿರ್ವಚನ

"ವಿಃ ಪಕ್ಷಿಪರಮಾತ್ಮನೋಃ" ಇತಿ ಪ್ರಮಾಣಾತ್‌ವೇಃ ಪರಮಾತ್ಮನೋ ಜಯಃ ಸರ್ವೋತ್ಕರ್ಷೋ ಯಸ್ಮಿನ್ ತತ್ ವಿಜಯಂ ಬ್ರಹ್ಮಮೀಮಾಂಸಾಶಾಸ್ತ್ರಮ್। ತದೇವ ಧ್ವಜಃ ಕೇತುರ್ಯಸ್ಯಸಃ ವಿಜಯಧ್ವಜಃ ಶ್ರೀಮನ್ಮಧ್ವಾಚಾರ್ಯಾಃ। ತಸ್ಯ ತೀರ್ಥಃದಯಾಪಾತ್ರಭೂತಃ ವಿಜಯಧ್ವಜತೀರ್ಥಃ॥

ಅಹೋಬಲ ನೃಸಿಂಹಾಚಾರ್ಯಾಃ

ವಿಃ ಪಕ್ಷಿ ಪರಮಾತ್ಮನೋಃ ಪ್ರಮಾಣದಿಂದ ವೇಃ ಭಗವಂತನ ಸರ್ವೋತ್ಕರ್ಷವು ಎಲ್ಲಿ ಇರುವದೋ ಅದು ವಿಜಯಂ ಅಂದರೆ ಬ್ರಹ್ಮಮಿಮಾಂಸಾಶಾಸ್ತ್ರವು ಅದೇ ಧ್ವಜವಾಗಿ ಉಳ್ಳವರು ವಿಜಯಧ್ವಜರು ಅಂದರೆ ಶ್ರೀಮನ್ ಮಧ್ವಾಚಾರ್ಯರು, ಅವರ ದಯಾಪಾತ್ರಭೂತರು ವಿಜಯಧ್ವಜತೀರ್ಥರು.

**(ಸಪ್ತಮಸ್ಕಂಧ ವ್ಯಾಖ್ಯಾನದಿಂದ)**

****

# ಗ್ರಂಥ ಋಣ

1) ಶ್ರೀಮದ್ ಭಾಗವತ–ವಿಜಯಧ್ವಜೀಯ (ಸಂಸ್ಕೃತ)
ಶ್ರೀ ರಾಘವೇಂದ್ರ ಸ್ವಾಮಿ ಬೃಂದಾವನ ಸಮಿತಿ ಬಾಗಲಿಂಗಂಪಲ್ಲಿ ಹೈದರಾಬಾದ

2) ದ್ವೈತವೇದಾಂತ ವಾಙ್ಮಯ ಹಾಗೂ ಇತಿಹಾಸ (ಕನ್ನಡಾನುವಾದ) –
ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಪ್ರತಿಷ್ಠಾನ ಬೆಂಗಳೂರು.

3) ಶ್ರೀ ಜಯತೀರ್ಥರು – ಶ್ರೀಕೊರಟಿ ಶ್ರೀನಿವಾಸರಾವ್

4) ತತ್ತ್ವವಾದ(ಬೆಂಗಳೂರು) ಮಾಸಪತ್ರಿಕೆ – ಅ.ಭಾ.ಮಾ.ಮ. ಮಂಡಲ ಬೆಂಗಳೂರು

5) ಶ್ರೀ ಸುಧಾ ಮಾಸಪತ್ರಿಕೆ – ಶ್ರೀಮದುತ್ತರಾದಿಮಠ ಬೆಂಗಳೂರು.

6) ಶ್ರೀಮದ್ ಭಾಗವತ
ಪ್ರಥಮಸ್ಕಂಧ (ಕನ್ನಡಾನುವಾದ) – ಶ್ರೀದಿ॥ ವಿದ್ವಾನ್ ಎನ್ ಕೃಷ್ಣಮೂರ್ತಿ

| | | |
|---|---|---|
| 39) | ವ್ಯಾಸ-ದಾಸ ವಾಣಿಯಲ್ಲಿ ದೈನಂದಿನ ಆಚರಣೆ | 20-00 |
| 40) | ಭಾರತೀಯ ಸಂಸ್ಕೃತಿಯಲ್ಲಿ ಗೋವು | 25-00 |
| 41) | ಶ್ರೀಮಂಗಲಾಷ್ಟಕಮಂಜರೀ | 15-00 |
| 42) | ಶ್ರೀ ದ್ವಾದಶಸ್ತೋತ್ರ-ಚಿಂತನ ಮಂಥನ | 20-00 |
| 43) | ಶ್ರೀಮದ್ ಭಾಗವತಸೂಕ್ತಿಸುಧಾನಿಧಿ (ಕನ್ನಡಾನುವಾದ ಸಹಿತ) | 20-00 |
| 44) | ಶ್ರೀಕರಾವಲಂಬನಸ್ತೋತ್ರಮಂಜರೀ (17 ಸ್ತೋತ್ರಗಳು ಮೂಲ ಮಾತ್ರ) | 20-00 |
| 45) | ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ ಮಂಥನ | 25-00 |
| 46) | ಸ್ಮರಿಸು ಸಂತತ ಹರಿಯ (ಶ್ರೀ ಜಗನ್ನಾಥದಾಸರ ಒಂದು ಪದ್ಯದ ವಿವರಣೆ) | 15-00 |
| 47) | ಶ್ರೀವೈಕುಂಠವರ್ಣನೆ ಸಾರಸಂಗ್ರಹ | 20-00 |
| 48) | ಋಗ್ವೇದೀಯ ಶ್ರಾದ್ಧವಿಧಾನ (ಪಿಂಡಪ್ರದಾನ,ಸಂಕಲ್ಪ ಶ್ರಾದ್ಧಗಳ ವಿವರಣೆ ಸಹಿತ) | 25-00 |
| 49) | ಶ್ರೀ ಸತ್ಯಧರ್ಮತೀರ್ಥರು (ಚರಿತ್ರೆ,ಸ್ತೋತ್ರಗಳು) | 20-00 |
| 50) | ಗೋಪೀಚಂದನ, ಊರ್ಧ್ವಪುಂಡ್ರ,ಮುದ್ರಾಧಾರಣೆಗಳ ಅವಶ್ಯಕತೆ | 30-00 |
| 51) | ಧಾರ್ಮಿಕ ಆಚರಣೆಗಳ ಹಿನ್ನೆಲೆ (ಪ್ರಮಾಣ ಸಹಿತ) | 10-00 |
| 52) | ಶ್ರೀ ವೆಂಕಟೇಶಮಹಾತ್ಮೆ ಸಾರಸಂಗ್ರಹ (ನವರಾತ್ರಿ ಸಂಕಲ್ಪ ಸಹಿತ) | 15-00 |
| 53) | ಶ್ರೀ ಕಾಠಕೋಪನಿಷತ್ (ಒಂದು ಅಧ್ಯಯನ) | 30-00 |
| 54) | ಇತಿಹಾಸ ಪುರಾಣಗಳಲ್ಲಿ ಸ್ತ್ರೀಧರ್ಮಗಳು (ಸ್ತ್ರೀಜಪಕ್ರಮ ಸಹಿತ) | 15-00 |
| 55) | ದಾಸಸಾಹಿತ್ಯದ ಹಿನ್ನೆಲೆ(ವಿಶ್ವಮಧ್ವಮಹಾಪರಿಷತ್,ಬೆಂಗಳೂರು ಪ್ರಕಟಿತ) | 30-00 |
| 56) | ಜೀವನಯಜ್ಞ (ಆಯುರ್ಯಜ್ಞ) | 10-00 |
| 57) | ಭಗವತ್ತತ್ತ್ವಚಿಂತನೆ | 40-00 |
| 58) | ಶ್ರೀಹಯವದನವಿಠ್ಠಲಾಂಕಿತರ ಕೃತಿಗಳು | 15-00 |
| 59) | ಈಶಾವಾಸ್ಯೋಪನಿಷತ್ ಒಂದು ಅಧ್ಯಯನ | 20-00 |
| 60) | ದೇಹರಥ-ದೇವರಥ (60 ವರ್ಷದ ಶಾಂತಿ ವಿವರಣೆ ಸಹಿತ) | 20-00 |
| 61) | ಶ್ರೀಪ್ರಹ್ಲಾದರಾಜರ ಉಪದೇಶ ಸಾರಸಂಗ್ರಹ | 15-00 |
| 62) | ಸತ್ಸಂಗ (ಸಾಧು ಸಜ್ಜನರ ಸಂಗ) | 15-00 |
| 63) | ಶ್ರೀವೇದವ್ಯಾಸ ಕರಾವಲಂಬನ ಸ್ತೋತ್ರಮ್(ಕನ್ನಡಾನುವಾದ) | 15-00 |
| 64) | ದೇವಪೂಜಾ ಸಾಮಗ್ರಿಗಳು-ಪರಿಚಯ | 20-00 |
| 65) | ಶ್ರೀಸರ್ವಮೂಲ ಸೌರಭ (ಸರ್ವಮೂಲಗ್ರಂಥಗಳ ಸಂಕ್ಷಿಪ್ತ ಪರಿಚಯ, ಸರ್ವಮೂಲ ಆಧೃತ ಶ್ಲೋಕಗಳ ಕನ್ನಡಾನುವಾದ ಸಹಿತ) | 20-00 |
| 66) | ಕಪಿಲಗೀತಾ ಸಾರಸಂಗ್ರಹ | 20-00 |
| 67) | ಮಂತ್ರಪುಷ್ಪ ಅಷ್ಟಾವಧಾನ ಸಹಿತ | 15-00 |
| 68) | ಸದಾಚಾರಸ್ಮೃತಿ - ಒಂದು ಅಧ್ಯಯನ | 20-00 |
| 69) | ಶ್ರೀಮಜ್ಜಯತೀರ್ಥಸ್ತುತಿಃ ಹಾಗೂ ಶ್ರೀಮಜ್ಜಯತೀರ್ಥ ವಿಜಯಃ | 10-00 |
| 70) | ಅಧಿಕಮಾಸದ ಆಚರಣೆ (33 ಹಾಡುಗಳ ಸಹಿತ) | 15-00 |
| 71) | ಇತಿಹಾಸ ಪುರಾಣಾದಿಗಳಲ್ಲಿ ಪುರುಷ ಸೂಕ್ತಾರ್ಥ ವಿವರಣೆ | 25-00 |
| 72) | ಶ್ರೀಹಯವದನ ವಿಠ್ಠಲಾಂಕಿತರ ಕೃತಿಗಳು ಭಾಗ-2 | 20-00 |
| 73) | ರಾತ್ರೀಸೂಕ್ತ | 10-00 |
| 74) | ಸ್ತವರಾಜ ಸ್ತೋತ್ರಮಂಜರೀ | 20-00 |
| 75) | ಪ್ರಣವ ಪ್ರತಿಪಾದ್ಯ ಪ್ರಹ್ಲಾದ ವರದ (ಶ್ರೀ ಜಗನ್ನಾಥದಾಸರ ಒಂದು ಪದ್ಯದ ವಿವರಣೆ) | 15-00 |
| 76) | ದಾಸಸಾಹಿತ್ಯ ಕುಸುಮಾಂಜಲಿ | 30-00 |
| 77) | ಜೀವತತ್ತ್ವಚಿಂತನೆ | 50-00 |
| 78) | ಶ್ರೀ ವಿಜಯಧ್ವಜತೀರ್ಥರು (ಜೀವನ,ಕೃತಿಗಳಪರಿಚಯ) | 15-00 |

